ಈಗ ಕಿಕ್ಕಿರಿದ ಪ್ರೇಕ್ಷಕರವೃಂದಕ್ಕೆ ಪ್ರದರ್ಶಿಸಲ್ಪಡುತ್ತಲಿದೆ

ಬೆಂಗಳೂರು ಸಾಗರ್ ಮತ್ತು ನ್ಯೂ ಆಪೆರಾ

ಮೈಸೂರು - - ಚಾಮುಂಡೇಶ್ವರಿ

ಮಂಗಳೂರು ಬಾಲಾಜಿ :: ಕೆ.ಜಿ.ಎಫ್. ಕೃಷ್ಣಾ




ಇತರ ಕೇಂದ್ರಗಳಲ್ಲಿ ಪ್ರದರ್ಶನವನ್ನು ನಿರೀಕ್ಷಿಸಿ



## ಈ ಸಂಚಿಕೆಯಲ್ಲಿ



ಇವಲ್ಲದೆ ಒಗಟು, ಪದ್ಯ, ಚುಟಕ ಮುಂತಾದುವುಗಳನೇಕ.

# ಮುಖಚಿತ್ರ



ರುಕ್ಮಿಣಿಯು ಊರ ಹೊರಗಿನ ಅಂಬಿಕಾಲಯಕ್ಕೆ ಪೂಜೆಗೆ ಹೋಗಿದ್ದಳು. ವಿವಾಹ ಮಂಟಪಕ್ಕೆ ಬರುವ ದಾರಿಯಲ್ಲೇ ಕೃಷ್ಣನು ಸೈನ್ಯ ಸಮೇತನಾಗಿ ಬಂದು ಬಲಾತ್ಕಾರದಿಂದ ರುಕ್ಮಿಣಿಯನ್ನು ಎತ್ತಿಕೊಂಡು ಹೋದನೆಂಬ ವಿಷಯವು ರುಕ್ಮಿಗೆ ಗೊತ್ತಾಯಿತು. ಇದನ್ನು ಕೇಳಿದ ರುಕ್ಮಿಯು ಕೋಪಗೊಂಡು 'ನನ್ನ ಸಹೋದರಿಯನ್ನು ಆ ನೀಚನಿಂದ ಬಿಡಿಸಿಕೊಂಡು ಬರದ ಹೊರತು ನಾನು ಮನೆಗೆ ಬಂದು ಮುಖ ತೋರಿಸಲಾರೆ' ಎಂದು ಪ್ರತಿಜ್ಞೆ ಮಾಡಿ, ತನ್ನ ಅಕ್ಷೌಹಿಣಿ ಸೈನ್ಯ ದೊಂದಿಗೆ ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಹೊರಟನು. ರುಕ್ಮಿಯು ತನ್ನ ಸಾರಥಿಯನ್ನು ಕುರಿತು 'ನನ್ನ ರಥವನ್ನು ಈಗಲೇ ಆ ಗೋಪಾಲನ ಬಳಿಗೆ ವೇಗವಾಗಿ ತೆಗೆದುಕೊಂಡು ಹೋಗು, ನಾನು ಕೇವಲ ನಾಲ್ಕು ಬಾಣಗಳಿಂದಲೇ ಅವನನ್ನು ಸೋಲಿಸಿ ತಂಗಿಯನ್ನು ತರುವೆ' ಎಂದು ನುಡಿದನು. ಇತ್ತ ಶ್ರೀಕೃಷ್ಣನೂ ಸಹಾ ತನ್ನ ಮೇಲೆ ರುಕ್ಮಿಯು ಸೈನ್ಯ ಸಮೇತನಾಗಿ ಯುದ್ಧಕ್ಕೆ ಬರುತ್ತಿರುವುದನ್ನು ಕಂಡು, ಕೋಪಗೊಂಡು, ಯುದ್ಧಕ್ಕೆ ಸಿದ್ಧನಾದನು. ಇಬ್ಬರಿಗೂ ದೊಡ್ಡ ಯುದ್ಧ ನಡೆಯಿತು. ರುಕ್ಮಿಯು ಸೋತು ಕೃಷ್ಣನ ಕೈಸೆರೆ ಯಾದನು. ಇದನ್ನು ಕಂಡು ರುಕ್ಮಿಣಿಯು ದುಃಖಿಸುತ್ತಾ ಕೃಷ್ಣನ ಬಳಿಗೆ ಓಡಿ ಬಂದು 'ದೇವ ದೇವ! ಜಗನ್ನಾಥ!! ಈ ಒಂದು ಸಾರಿ ನನ್ನ ಅಣ್ಣನನ್ನು ಮನ್ನಿಸಿ' ಎಂದು ನಾನಾರೀತಿಯಿಂದ ಪ್ರಾರ್ಥಿಸತೊಡಗಿದಳು. ಅತ್ತ ಕೃಷ್ಣನು ರುಕ್ಮಿಯ ಕೈಕಾಲುಗಳನ್ನು ಹಗ್ಗದಿಂದ ಬಿಗಿಯಾಗಿ ಕಟ್ಟಿಸಿ, ತನ್ನ ಕಾಲಡಿ ಉರುಳಿಸಿಕೊಂಡು, ಕೂದಲು, ಮೀಸೆಗಳನ್ನು ಕೀಳಿಸಿ, ಕುರೂಪಿಯನ್ನಾಗಿ ಮಾಡಿದ. ಅಷ್ಟರಲ್ಲೇ ಬಲರಾಮನು ಕೃಷ್ಣನ ಬಳಿ ಬಂದು 'ಸಹೋದರಾ! ಇದೆಲ್ಲಾ ಏನು ನಡಿಸಿರುವೆ?.... ಅದರಲ್ಲೂ ನಮ್ಮ ರುಕ್ಮಿಣಿಯ ಅಣ್ಣನಿಗೆ....! ಆಗಿದ್ದು ಆಯಿತು. ಪುರುಷನ ಪೌರುಷವಾದ ಮೀಸೆಗಳು ಹೋದ ಮೇಲೆ ಅವನಿಗೆ ಶಿರಚ್ಛೇದನ ವಿಲ್ಲ. ಆದ್ದರಿಂದ ಇವನನ್ನು ಈಸಾರಿ ಬಿಟ್ಟುಬಿಡು. ಎಷ್ಟಾದರೂ ಅಲ್ಪ ಬುದ್ಧಿ' ಎಂದು ಹೇಳಿದ.

ಅದಕ್ಕೆ ಕೃಷ್ಣನು 'ಅಣ್ಣಾ! ಇವನಿಗೆ ನಾನೇನೂ ಮಾಡಿಲ್ಲ. ಇದು ಅವನ ಕರ್ಮಕ್ಕೆ ತಕ್ಕ ಪ್ರತಿಫಲವು' ಎಂದು ಹೇಳಿ ರುಕ್ಮಿಗೆ ಜೀವದಾನ ಮಾಡಿದನು. ಈರೀತಿಯಾದ ಅಪಮಾನವನ್ನು ಹೊಂದಿ, ಅಪಜಯವನ್ನು ಪಡೆದ ರುಕ್ಮಿಯು 'ನನ್ನ ಶಪಥವು ಈಡೇರಲಿಲ್ಲವಲ್ಲಾ' ಎಂದು ಪಶ್ಚಾತ್ತಾಪ ಪಡುತ್ತಾ, ವೇಷ ಮರಸಿಕೊಂಡು, ಭೋಜಕೋಟವೆಂಬ ಊರಿಗೆ ಬಂದು ನೆಲಸಿದ.

ಸಂಪುಟ ೬ ಮೇ
ಸಂಚಿಕೆ ೫ ೧೯೫೧

# ಚಂದಮಾಮ

## ಅಂಚೆಯ ಪೇದೆ

"ನವಗಿರಿನಂದ"

ಅಂಚೆಯ ಪೇದೆ! ಅಂಚೆಯ ಪೇದೆ
ಸಂಚಿಯ ಪೇದೆ! ಮಿಂಚುತ ಬಂದ!
"ಕಾಗದ ಉಂಟೋ ಕಾಗದ!"
"ಕೊಳ್ಳೀ ನಿಮ್ಮಾ ಕಾಗದ!"
"ಮಾವನೊ ಭಾವನೊ, ಅಣ್ಣನೊ ನೆಂಟನೊ,
ಕಾಗದ ಬರೆದವರಾರೋ ಕಾಣೆ!"
"ಕಾಗದ ಉಂಟೋ ಕಾಗದ!"
ಕೊಳ್ಳೀ ನಿಮ್ಮಾ ಕಾಗದ!"
"ಹುಟ್ಟೋ ಸಾವೋ ಅಳುವೋ ನಗುವೋ
ಕಾಗದವೇನೋ ಒಂದೂ ಕಾಣೆ!"
"ಕಾಗದ ಉಂಟೋ ಕಾಗದ!"
"ಕೊಳ್ಳೀ ನಿಮ್ಮಾ ಕಾಗದ!"
"ಮಿತ್ರ ಬರೆಯಲಿ, ಶತ್ರು ಬರೆಯಲಿ,
ಸಾಲವ ಕೊಟ್ಟಾ ಸಾಲಿಗ ಬರೆಯಲಿ,
ಸುಖವೋ ದುಃಖವೋ ಏನೇ ಇರಲಿ,
ಎಲ್ಲರು ಕರೆವರು ಎನ್ನನು ನೋಡಿ!"
"ಕಾಗದ ಉಂಟೋ ಕಾಗದ!"
"ಕೊಳ್ಳೀ ನಿಮ್ಮಾ ಕಾಗದ!"










# ಲೋಭಿ

ಒಂದಾನೊಂದು ಕಾಲದಿ ಒಬ್ಬ
ಸೆಟ್ಟಿಯು ಇದ್ದನು ಕಡು ಲೋಭಿ ॥
ಮಕ್ಕಳು ಮರಿಗಳು ಇಲ್ಲದ ಅವನಲಿ
ಇದ್ದವು ತುಂಬಾ ನಾಣ್ಯಗಳು ॥

ದಾನ ಧರ್ಮಗಳ ಮಾಡದ ಲೋಭಿ
ತನ್ನಲಿ ಇದ್ದಿಹ ಹಣವನ್ನು ॥
ಕನ್ನವ ಕೊರೆದು ಕಳ್ಳರು ತೆಗೆಯರೆ?
ಮಾಡಲಿ ಏನು ಯೆಂದೆನುತ ॥

ಯೋಚಿಸಿ ಯೋಚಿಸಿ ಮನೆಯಾ ಕೋಣೆಯ
ನೆಲದಲಿ ಹೊಂಡವ ತೋಡುತಲಿ ॥
ಯಾರಿಗು ಅರಿಯದ ತೆರದಲಿ ನಾಣ್ಯವ
ಪಾತ್ರದಿ ತುಂಬಿಸಿ ಹೂತಿಡುತ ॥

ಧನದಾ ಲೋಭದಿ ಸೆಟ್ಟಿಯು ತಾನು
ಧನದಾ ಪಾತ್ರವ ಆಗಾಗ ॥
ಹೊಂಡದಿ ತೆಗೆಯುತ ನಾಣ್ಯವ ನೋಡುತ
ಮನದಲಿ ಸಂತಸ ಪಡುತಿದ್ದ ॥

ಸೆಟ್ಟಿಯು ಪಾತ್ರವ ಹೊಂಡದಲಿಡುವುದ
ಕಾಣುತ ಚೋರನು ಒಂದು ದಿನ ॥

ಟಿ. ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ.

ಸೆಟ್ಟಿಯು ಇಲ್ಲದ ಸಮಯವ ಕಾಯುತ
ಮನೆಯನು ಹೊಕ್ಕುತ ತೋಷದಲೀ ॥

ನೆಲವನು ಅಗೆಯುತ ಪಾತ್ರವತೆಗೆಯುತ
ನಾಣ್ಯವನೆಲ್ಲವ ಒಯ್ಯುತಲೀ ॥
ಚೋರನು ಓಡಿದ ಸೆಟ್ಟಿಯು ಮನೆಯನು
ಸೇರುತ ಕಂಡನು ಬರಿ ಹೊಂಡ ॥

'ಗೋಳೋ' ಎಂದನು ಹೊಂಡದ ಬದಿಯಲಿ
ಬಿದ್ದಿಹ ಖಾಲೀ ಪಾತ್ರೆಯನು ॥
ಕಾಣುತ ಸೆಟ್ಟಿಯು ಸೇರಿದರೆಲ್ಲರು
ಸೆಟ್ಟಿಯ ಕೂಗಿಗೆ ನೆರೆಯವರು ॥

ನಾಣ್ಯವು ಹೋಗಲಿ ಮರುಗುವಿಯೇಕೆ?
ಹೊಂಡದಿ ಬರಿ ಪಾತ್ರವನಿಟ್ಟು
ಮಣ್ಣನು ಹಾಕು ಪಾತ್ರದಿ ನಾಣ್ಯವು
ತುಂಬಿದೆ ಎಂದುಕೊ ಮನದಲ್ಲಿ ॥

ಎನುತಲಿ ಕೂಡಿದ ನೆರೆಯವರೆಲ್ಲರು
ಬುದ್ಧಿಯ ಹೇಳುತ ಸೆಟ್ಟಿಯನು ॥
ಸಮಾಧಾನವ ಪಡಿಸುತ ಎಲ್ಲರು
ಸರಿದರು ತಮ್ಮಯ ಮನೆಗಾಗಿ ॥







# ಶತಪತ್ರ ಸುಂದರಿ

ಘೂರ್ಜರದೇಶದಲ್ಲಿ ಅಗ್ನಿಮಿತ್ರನೆಂಬ ರಾಜಕುಮಾರನೊಬ್ಬನಿದ್ದನು. ಆತನಿಗೆ ಅಂದ ಚೆಂದಗಳು, ಶಕ್ತಿಸಾಮರ್ಥ್ಯಗಳೇನೋ ಇದ್ದವು. ಆದರೆ ರಾಜ್ಯ ಮಾತ್ರ ವಿರಲಿಲ್ಲ. ಎಂದಿಗಾದರೂ ಅದೃಷ್ಟತುಂಬಿ ಬರಲಾರದೇ ಎಂಬ ಆಶೆಯಿಂದ ಆತನು ಹೊರಟು, ಮಳಯಾಳದೇಶವನ್ನು ಸೇರಿದನು.

ದಾರಿಯಲ್ಲಿ ಆತನಿಗೆ ನದಿಗಳು, ಅಡವಿಗಳು, ಬೆಟ್ಟಗಳು ಅನೇಕವಾಗಿ ಸಿಕ್ಕಿದವು. ಸಾಧ್ಯವಾದಷ್ಟು ದೂರ ನಡೆದು, ಕೈಗೆಟಕಿದ ಆಹಾರ ಉಂಡು, ಮಧ್ಯಮಧ್ಯ ಎಲ್ಲೋ ಒಂದೆಡೆಯಲ್ಲಿ ಮಲಗಿಕೊಂಡು, ಆಯಾಸ ಪರಿಹಾರವಾದ ಮೇಲೆ ಮುಂದಕ್ಕೆ ನಡೆಯುತ್ತಿದ್ದ. ಹೀಗೇ ಕೆಲದಿನಗಳಾದ ತರುವಾಯ ಶಂಕರಗಿರಿ ಎಂಬ ಬೆಟ್ಟದ ಸಮೀಪಕ್ಕೆ ಬಂದ. ಕತ್ತಲಾಗಿಬಿಟ್ಟಿದ್ದರಿಂದ ಅಂದು ಅಗ್ನಿಮಿತ್ರನು ಆ ಬೆಟ್ಟದಡಿಯಲ್ಲಿ ವಿಶ್ರಮಿಸಲು ನಿರ್ಧರಿಸಿದ.

ಹಾಗೇ ಮಲಗಿ ಆತನು ಇನ್ನೂ ಕಣ್ಣು ಮುಚ್ಚುವ ಮೊದಲು ಆತನಿಗೆ ಎದುರಾಗಿ ಒಂದು ದೊಡ್ಡ ದೇವಸ್ಥಾನ ಕಾಣಿಸಿತು. ಅದೊಂದು ಅದ್ಭುತವಾದ ಆಲಯ. ಅದರ ಹೆಚ್ಚಳ ಏನೆಂದರೆ ಇಟ್ಟಿಗೆ, ಸುಣ್ಣ, ಕಲ್ಲುಗಳಿಂದ ಕಟ್ಟಿದ ಗುಡಿಯಲ್ಲ ಅದು! ಎಲ್ಲಾ ಬಂಗಾರವೇ! ಗುಡಿಯ ಮೇಲೆ, ಗೋಪುರದ ಮೇಲೆ, ಪ್ರಾಕಾರಗಳ ಮೇಲೆ, ಮಂಟಪದ ಮೇಲೆ ಇರುವ ಶಿಲ್ಪವೆಲ್ಲಾ ನವರತ್ನ ಖಚಿತವಾಗಿತ್ತು. ಬೆಕ್ಕಸಬೆರಗಾಗಿ ನೋಡುತ್ತಿದ್ದ ಅಗ್ನಿಮಿತ್ರನ ಕಣ್ಣುಗಳು ಕೋರೈಸಿದವು.

ಮತ್ತೊಂದು ವಿಚಿತ್ರ ಇದರಲ್ಲಿ. ಈಗ್ಗೆ ಒಂದು ನಿಮಿಷದ ಹಿಂದೆ ಅದೇ ದಾರಿಯಲ್ಲಿ ನಡೆದು ಬಂದ ಆತನಿಗೆ ಈ ದೇವಾಲಯ ಕಾಣಿಸಿರಲೇ ಇಲ್ಲ. ಹಾಗಾದರೆ ಅಷ್ಟರಲ್ಲಿ ಇದು ಹೇಗೆ ಬಂತು? ಇದು ಯಾವುದೋ ಇಂದ್ರಜಾಲವಿರಬೇಕೆಂದು ಅನ್ನಿಸಿತು ಆತನಿಗೆ. ಮಂತ್ರ ತಂತ್ರಗಳಿಗೆ, ಗಾರುಡಿ ವಿದ್ಯೆಗಳಿಗೆ ಮಳಯಾಳ ಹೆಸರು ಪಡೆದ ದೇಶವಷ್ಟೆ! ಆದ್ದರಿಂದ ಇದು ಯಾವುದೋ ಮಾಯೆಯೇ ಇರಬೇಕು. ಇಲ್ಲದಿದ್ದರೆ ಒಂದು ನಿಮಿಷದಲ್ಲಿ ಇಂತಹ ಭಾರಿ ದೇವಸ್ಥಾನ ಪ್ರತ್ಯಕ್ಷವಾಗುವುದೆಂದರೇನು?

ಪಿ. ಲೀಲಾಬಾಯ್, ಹುಬ್ಬಳಿ





ಅಗ್ನಿಮಿತ್ರ ಆಶ್ಚರ್ಯಪಡುತ್ತಾ ಆಲೋಚಿಸುತ್ತಿರುವಲ್ಲಿ ಆತನ ಬುದ್ಧಿಗೆ ಒಂದು ಯೋಚನೆ ಹೊಳೆಯಿತು. ಅದು ನಿಜವಾದ ದೇವಾಲಯವೋ, ಇಲ್ಲ ಬರಿ ಭ್ರಮೆಯೋ ಕೈಯಿಂದ ಮುಟ್ಟಿ ನೋಡಿದರೆ ತಿಳಿದು ಹೋಗುವುದೆಂದು, ಮಲಗಿದ್ದಾತ ಎದ್ದು ನಿಂತುಕೊಂಡ.

ಆತನು ಹಾಗೆ ಎದ್ದನೋ ಇಲ್ಲವೋ, ಆವರೆವಿಗೂ ದೇದೀಪ್ಯಮಾನವಾಗಿ ಪ್ರಕಾಶಮಾನವಾಗಿ ಕಾಣಿಸುತ್ತಿದ್ದ ಆ ದೇವಾಲಯ, ಗೋಪುರ ಪ್ರಾಕಾರಗಳು, ಸಮಸ್ತವೂ ಅದೃಶ್ಯವಾಗಿ, ಎಲ್ಲಾ ಕತ್ತಲು ಕವಿದಂತಾಯಿತು. ಅಷ್ಟಕ್ಕೇ ಆತನು ಭಯಗೊಂಡು ಒಂದು ಹೆಜ್ಜೆಯಾದರೂ ಮುಂದಿಡಲಾರದೆ ಮತ್ತೆ ಅಲ್ಲೇ ಕುಳಿತುಬಿಟ್ಟ.

ಆದರೆ ಮಲಗಿಕೊಂಡ ಕೂಡಲೇ ಮತ್ತೆ ಆ ಗುಡಿ ಗೋಪುರಗಳೆಲ್ಲವೂ ಆತನಿಗೆ ಮೊದಲಿನಂತೆಯೇ ಕಾಣಿಸಿದವು. ಎದ್ದು ಮುಟ್ಟಿನೋಡೋಣ ಎಂದರೆ ಮಾಯವಾಗಿ ಬಿಡುತ್ತಿದೆ. ಮತ್ತೆ ಮಲಗಿದರೆ ಕಾಣಿಸುತ್ತದೆ ಇದೆಲ್ಲವೂ ನಿಜವೋ, ಇಲ್ಲ ಸ್ವಪ್ನವೋ ಎಂದುಕೊಳ್ಳುತ್ತಾ ಅಗ್ನಿಮಿತ್ರ ಒಂದು ಸಾರಿ ಗಟ್ಟಿಯಾಗಿ ಮೈ ಚಿವುಟಿಕೊಂಡು ನೋಡಿದ. ಚಿವುಟಿದ ಜಾಗದಲ್ಲಿ ನೋವುಂಟಾಯಿತು. ತಾನು ನೋಡುತ್ತಿರುವುದು ನಿಜ; ಕನಸಲ್ಲ ಎಂದು ವ್ಯಕ್ತವಾಯಿತು.

ಗುಡಿಯ ಗೋಡೆಯನ್ನು ಮುಟ್ಟೋಣವೆಂದು ಮತ್ತೆ ಆಲೋಚಿಸಿ ಎದ್ದ. ಏನಿದೆ ಅಲ್ಲಿ? ಹಿಂದಿನಂತೆಯೇ ಗುಡಿ ಮಾಯವಾಗಿ ಕತ್ತಲಾವರಿಸಿತು.

ಏನೂ ತೋರದೆ ಅಲ್ಲೇ ಮಲಗಿದ ಮತ್ತೆ. ಕೂಡಲೇ ದೇವಾಲಯ ಪ್ರತ್ಯಕ್ಷವಾಯಿತು. ಎದ್ದರೆ ಮತ್ತೆ ಎಲ್ಲಿ ಮಾಯವಾಗುವುದೋ ಎಂಬ ಭಯದಿಂದ ಆತನ ಹಾಗೇ ಮಲಗಿಕೊಂಡು ಆ ದೃಶ್ಯವನ್ನು ನೋಡುತ್ತಲಿದ್ದು ಬಿಟ್ಟ. ಆತನೊಂದಿಗೆ ಆ ದೃಶ್ಯವೂ ಹಾಗೇ ಉಳಿಯಿತು.

ಆದರೆ ತುಸ ಹೊತ್ತಾದ ಮೇಲೆ ಆತನ ಕಿವಿಯನ್ನು ತಟಕ್ಕೆಂದು ಒಂದು ಇರುವೆ ಕಚ್ಚಿತು. ತಟಾರನೆ ಎದ್ದ. ಗುಡಿ ಅದೃಶ್ಯವಾಯಿತು. ಕಡಿದದ್ದು ಇರುವೆಯೋ, ಇಲ್ಲ ಮತ್ತೆ ಯಾವುದಾದರೂ ಹುಳವೋ ಎಂದು ಕುಳಿತುಕೊಂಡು, ಆತನು ಕೈಯಿಂದ ಅಲ್ಲಿ



ಹುಡಕಲು ಪ್ರಾರಂಭಿಸಿದ. ಆತನ ಕೈಗೆ ಯಾವುದೋ ಮೂಲಿಕೆ ಯಂತಹದೊಂದು ಸಿಕ್ಕಿತು. ಆ ಕ್ಷಣವೇ ಗುಡಿ ಪ್ರತ್ಯಕ್ಷವಾಯಿತು. 'ಕುಳಿತುಕೊಂಡಿದ್ದರೂ ಗುಡಿ ಕಾಣಿಸಿತಲ್ಲಾ, ಈ ಸಾರಿ' ಎಂದು ಆ ಮೂಲಿಕೆಯನ್ನು ಕೈಯಲ್ಲಿಟ್ಟುಕೊಂಡೇ ಎದ್ದ. ಗುಡಿ ಕಾಣಿಸುತ್ತಲೇ ಇದೆ. ಮುಂದಕ್ಕೆ ನಡೆದ. ಗುಡಿ ಕಾಣಿಸುತ್ತಲೇ ಇತ್ತು. ಅಲ್ಲಿಗೆ ಹೋಗಿ ಅದನ್ನು ಮುಟ್ಟಿದ.

ನಿಜವಾಗಿ ಆ ಗುಡಿಯ ಗೋಡೆಗಳು ಬಂಗಾರದ ಗೋಡೆಗಳೇ! ಆ ಶಿಲ್ಪದಲ್ಲಿ ಹುದುಗಿಸಿದ್ದವೆಲ್ಲವೂ ಕೆಂಪು, ಪಚ್ಚೆ, ಮರಕತ ಮಾಣಿಕ್ಯಗಳೇ! 'ಅಷ್ಟು ಹೊತ್ತು ಮಲಗಿಕೊಂಡಾಗ ಕಾಣಿಸಿ, ಎದ್ದರೆ ಮಾಯವಾಗಲು ಕಾರಣ ಈ ಮೂಲಿಕೆಯೇ ಇರಬೇಕು' ಎಂದು ಅಗ್ನಿಮಿತ್ರನಿಗೆ ಖಚಿತವಾಯಿತು. ತಾನು ಮಲಗಿದ್ದಾಗ ತನ್ನ ತಲೆಗೆ ಈ ಮೂಲಿಕೆ ತಗಲಿ ಆ ದೃಶ್ಯವು ಕಾಣಬರುತ್ತಿದ್ದುದೂ, ಎದ್ದಾಗ ಮೂಲಿಕೆಯ ಸಂಪರ್ಕವಿಲ್ಲದೆ ಆ ನೋಟ ಅದೃಶ್ಯವಾಗುವುದೂ ಸಂಭವಿಸಿತೆಂದೂ, ಈಗ ಆ ಮೂಲಿಕೆ ತನ್ನ ಕೈಯಲ್ಲೇ ಇರುವುದರಿಂದ ಆ ಗುಡಿ ಕಾಣಿಸುವುದು ಮಾತ್ರವೇ. ಅಲ್ಲದೆ ಅದರ ಗೋಡೆಗಳನ್ನು ಸ್ಪರ್ಶಿಸುತ್ತಿರುವೆನೆಂದೂ ಗ್ರಹಿಸಿದ.

ಅಷ್ಟುದೂರ ಬಂದಮೇಲೆ ಆ ದೇವಾಲಯದಲ್ಲಿ ಪ್ರವೇಶಿಸಿ ಅಲ್ಲೇನೇನು ವಿಚಿತ್ರಗಳಿರುವುವೋ ನೋಡಬೇಕೆಂದು ಯಾರಿಗೆ ತಾನೇ ಮನಸ್ಸಾಗುವುದಿಲ್ಲ? ಅಗ್ನಿಮಿತ್ರನು ಮೂಲಿಕೆಯೊಂದಿಗೆ ಒಳಕ್ಕೆ ಹೋದ. ಗರ್ಭಗುಡಿಯ ಮುಂದಿನ ಮಂಟಪದಲ್ಲಿ ಹಾದು ಹೋಗುತ್ತಿದ್ದರೆ ಐದೈದರಂತೆ ಎರಡು ಕಡೆಗಳಲ್ಲೂ ಹತ್ತು ಬಂಗಾರದ ಗುಡಾಣಗಳಿದ್ದವು. ಆ ಗುಡಾಣಗಳು ತುಂಬಾ ಎತ್ತರವಾಗಿದ್ದವಾದುದರಿಂದ ಅಗ್ನಿಮಿತ್ರ ಮೆಟ್ಟುಗಾಲ ಮೇಲೆ ನಿಂತು ಇಣಿಕಿ ನೋಡದ ಹೊರತು ಒಳಗೆ ಇರುವುದೇನೂ ಕಾಣಿಸುವುದಿಲ್ಲ. ಮೊದಲನೇಯ ಗುಡಾಣದಲ್ಲಿ ಬಾತಿನ ಮೊಟ್ಟೆಯ ಗಾತ್ರದ ಕೆಂಪುಗಳಿದ್ದವು. ಇನ್ನೊಂದರಲ್ಲಿ ಪಚ್ಚೆಗಳಿದ್ದವು. ಮತ್ತೊಂದರಲ್ಲಿ ಗೋಮೇಧಿಕಗಳಿದ್ದವು. ಹಾಗೇ ಮುತ್ತುಗಳೂ, ಹವಳಗಳೂ, ನವರತ್ನಗಳಲ್ಲಿ ಇನ್ನೂ ಉಳಿದ ರತ್ನಗಳೂ ಇದ್ದವು. ಹತ್ತನೇಯ ಗುಡಾಣದಲ್ಲಿ ಬಂಗಾರದ ಮೊಹರುಗಳಿದ್ದವು.

ಆ ಗುಡಾಣಗಳೆಲ್ಲವನ್ನೂ ನೋಡಿದ ಕೂಡಲೇ ಅಗ್ನಿಮಿತ್ರನಿಗೆ ಮತಿ ಹೋದಂತಾಯಿತು! ಮೈಮೇಲೆ ಹಾಕಿಕೊಂಡಿದ್ದ ತುವಾಲನ್ನು ಹರಡಿ ಪ್ರತಿ ಗುಡಾಣದಿಂದಲೂ ಒಂದೊಂದು ಹಿಡಿ ಎತ್ತಿ ಹಾಕಿಕೊಂಡು ಮೂಟೆ ಕಟ್ಟಲು ಪ್ರಾರಂಭಿಸಿದ. ಆದರೆ ಅದೇನು ವಿಚಿತ್ರವೋ ಆ ಒಂಬತ್ತು ಹಿಡಿಗಳ ರತ್ನಗಳಲ್ಲಿ ಒಂದೊಂದು ಜಾತಿಗೆ ಒಂದೊಂದರಂತೆ ಮಾತ್ರ ಉಳಿದು ಮಿಕ್ಕವು ಆಯಾ ಗುಡಾಣಗಳಿಗೇ ಹೊರಟು ಹೋದವು.

ಅಗ್ನಿಮಿತ್ರ ಬುದ್ಧಿವಂತನಾದುದರಿಂದ 'ಅತಿ ಆಸೆ ಕೆಲಸಕ್ಕೆ ಬಾರದು' ಎಂದು ಅರಿತು ಮಿಕ್ಕ ರತ್ನಗಳನ್ನು ಮೂಟೆ ಕಟ್ಟಿಕೊಂಡು ಗರ್ಭಗುಡಿಯನ್ನು ಪ್ರವೇಶಿಸಿದನು.

ಆತನಿಗೆ ಎದುರಾಗಿ ನೂರುದಳದ ಬಂಗಾರದ ಕಮಲದ ಮೇಲೆ ಪ್ರಸನ್ನವದನೆಯಾಗಿ ಕುಳಿತಿದ್ದ ಲಕ್ಷ್ಮಿದೇವಿ ಕಾಣಿಸಿದಳು. ಆಕೆಯ ಪಾದಗಳ ಬಳಿ "ಶತಪತ್ರಸುಂದರಿ" ಎಂಬ ಅಕ್ಷರಗಳು ವಿದ್ಯುದ್ದೀಪಗಳಂತೆ ಹೊಳೆಯುತ್ತಿದ್ದವು. ಆ ಸುಂದರ ಮೂರ್ತಿಗೆ ಅಗ್ನಿಮಿತ್ರನು ಕೈ ಜೋಡಿಸಿ, ಭಕ್ತಿಪಾರವಶ್ಯನಾಗಿ 'ಶತಪತ್ರಸುಂದರಿ' ಎಂದು ನಮಸ್ಕಾರ ಮಾಡಿದ. ಆ ತನ್ಮಯತೆಯಲ್ಲಿರುವಾಗ ಆತನ ಕೈಯಲ್ಲಿದ್ದ ಮೂಲಿಕೆ ಕೆಳಗೆ ಬಿದ್ದು ಹೋಯಿತು. ಇನ್ನೇನಿದೆ? ಕಣ್ಣು ತೆರೆದು ನೋಡಿದರೆ ಶತಪತ್ರಸುಂದರಿಯಾಗಲೀ, ಗುಡಾಣಗಳಾಗಲೀ, ದೇವಾಲಯವಾಗಲೀ ಇಲ್ಲ. ಆತನು ಮೂಲಿಕೆಗಾಗಿ ಅಲ್ಲೆಲ್ಲಾ ತಡಕಾಡಿದ. ಲಾಭವಿಲ್ಲದಾಯಿತು. ಭುಜದ ಮೇಲಿನ ಗಂಟು ಮಾತ್ರ ರತ್ನಗಳೊಂದಿಗೆ ಹಾಗೇ ಇತ್ತು.




'ಎಷ್ಟು ಪ್ರಾಪ್ತಿಯೋ ಅಷ್ಟು' ಎಂದುಕೊಂಡು ಅಗ್ನಿಮಿತ್ರ ಆ ಬೆಟ್ಟದಿಂದ ಇಳಿದು ಹೊರಟು ಬಂದ.

ಆ ಬೆಟ್ಟದ ಆಚೆಕಡೆ ಒಂದು ಪಟ್ಟಣ ಕಾಣಿಸಿತು. ಅಲ್ಲಿ ಪ್ರವೇಶಿಸಿದ ಕೂಡಲೇ ಅಗ್ನಿಮಿತ್ರನಿಗೆ ಯಾವುದೋ ಡಂಗುರ ಸಾರುತ್ತಿರುವುದು ಕೇಳಿಸಿತು. ಸರಿಯಾಗಿ ತಿಳಿಯಲಾರದೆ ಆತನು 'ಏನಪ್ಪಾ ಆ ಸುದ್ದಿ' ಎಂದು ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬನನ್ನು ಕೇಳಿದ. ಅದಕ್ಕೆ ಆತನು 'ಮತ್ತೇನಿದೆ, ಮಾಮೂಲು ಪ್ರಕಟನೆಯೇ!' ಎಂದ.

"ನಾನು ಈ ಪಟ್ಟಣಕ್ಕೆ ಹೊಸಬ. ನಿಮಗೆ

ಮಾಮೂಲಾದರೂ ಆ ಸುದ್ದಿ ಏನೋ ನನಗೆ ಹೊಸದೇ ಅಲ್ಲವೇ?'' ಎಂದ ಅಗ್ನಿಮಿತ್ರ. ಅಗ ಆತನು "ಹಾಗಾದರೆ ಕೇಳು. ನಮ್ಮ ರಾಜನಿಗೆ ಒಬ್ಬ ಮಗಳಿದ್ದಾಳೆ. ಆಕೆಗೆ ಹುಚ್ಚು. ಮದುವೆ ಮಾಡಿಕೋ ಅಂತ ಅಂದರೆ 'ಶತಪತ್ರಸುಂದರಿ ದೇವಾಲಯದಲ್ಲಿರುವ ರತ್ನಗಳನ್ನು ತಂದಾತನನ್ನು ವಿವಾಹವಾಗುವನೇ ಹೊರತು ಬೇರೆಯವರನ್ನು ಆಗುವುದಿಲ್ಲ' ಎಂದು ಹೇಳುತ್ತಾಳೆ. ಚಿಕ್ಕಂದಿನಲ್ಲಿ ಯಾರೋ ಯೋಗಿ ಬಂದು ಆ ರತ್ನಗಳನ್ನು ತಂದಾತನನ್ನು ಬಿಟ್ಟು ಬೇರೆಯವರನ್ನು ಮದುವೆಯಾಗಬೇಡ ಎಂದು ಹೇಳಿದನಂತೆ. 'ಎಲ್ಲಿದೆ ಆ ದೇವಾಲಯ' ಅಂತ ಕೇಳಿದರೆ 'ನನಗೆಮಾತ್ರ ತಿಳಿದಿದೆಯೇ?' ಎನ್ನುತ್ತಾಳೆ. ಅಂತಹ ಗುಡಿ ಈ ಭೂಲೋಕದಲ್ಲಿದ್ದರಲ್ಲವೇ ಆ ರತ್ನಗಳನ್ನು ತರುವುದು? ಆ ರತ್ನಗಳನ್ನು ತಂದಾತನಿಗೇ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುವೆನೆಂದೂ, ರಾಜ್ಯವನ್ನೂ ಕೊಡುವೆನೆಂದೂ ದಿನಾ ಡಂಗೂರ ಸಾರಿಸುತ್ತಿರುತ್ತಾನೆ ರಾಜ, ತಿಳಿಯಿತೇ?'' ಎಂದು ನಂಜು ನಗೆ ನಕ್ಕು ತನ್ನ ದಾರಿ ತಾನು ಹಿಡಿದ.

ಅಗ್ನಿಮಿತ್ರ ಕೂಡಲೇ ರಾಜನ ಹತ್ತಿರಕ್ಕೆ ಹೋಗಿ "ನಾನು ಶತಪತ್ರಸುಂದರಿ ಆಲಯದಿಂದ ರತ್ನಗಳನ್ನು ತಂದಿರುವೆನು" ಎಂದ. ಅಲ್ಲಿದ್ದವರೆಲ್ಲರೂ 'ಮತ್ತೊಬ್ಬ ಹುಚ್ಚ ಬಂದಿದ್ದಾನೆ' ಎಂದುಕೊಂಡರು. ಆದರೆ ಅಗ್ನಿಮಿತ್ರ ಗಂಟುಬಿಚ್ಚಿ ರತ್ನಗಳನ್ನು ತೋರಿಸಲು ಅವರ ಬಾಯಿಗೆ ಬೀಗ ಹಾಕಿದಂತಾಯಿತು.

ಅವರೆಲ್ಲರೂ ಹುಚ್ಚಳೆಂದುಕೊಳ್ಳುತ್ತಿದ್ದ ರಾಜಕುಮಾರಿ ಈ ವಿಷಯವನ್ನು ಅರಿತು, ಕರೆಕಳುಹಿಸುವ ಮೊದಲೇ ತಾನಾಗಿ ಓಡಿ ಬಂದು ಥಳಥಳನೆ ಮೆರೆಯುತ್ತಿದ್ದ ಕಲ್ಲುಗಳನ್ನೂ, ಆ ಕಲ್ಲುಗಳ ಮುಂದೆ ನಸುನಗೆ ಬೀರುತ್ತಾ ನಿಂತಿದ್ದ ಅಗ್ನಿಮಿತ್ರನನ್ನು ಕಂಡು ಆತನ ಕೊರಳಿಗೆ ಪೂಮಾಲೆ ಹಾಕಿದಳು. ಅಲ್ಲಿದ್ದವರೆಲ್ಲರೂ ಆತನ ಸುತ್ತಲೂ ನೆರೆದು ಆ ಶತಪತ್ರಸುಂದರಿಯ ಗುಡಿ ಎಲ್ಲಿರುವುದೋ ಹೇಳಿ ಎಂದು ದುಂಬಾಲುಬಿದ್ದರು.

ಅಗ್ನಿಮಿತ್ರ ಯಾವುದೇ ವಿಷಯವನ್ನು ಮರೆಮಾಚದೆ, ಆ ಮೂಲಿಕೆಯ ಮಹಿಮೆ ಹೇಳಿದ. ಅದು ಸಿಕ್ಕಿದವರಿಗೆ ಹೊರತು ಆ ಗುಡಿ ಕಾಣಿಸುವುದಿಲ್ಲವೆಂಬ ರಹಸ್ಯ ಬಯಲು ಮಾಡಿದ. ಮೂಲಿಕೆಯ ಸಂಗತಿ ತಿಳಿದವರು ಶಂಕರಗಿರಿಗೆ ಹೋಗಿ, ಹುಡುಕಾಡಲು ಪ್ರಾರಂಭಿಸಿದರು. ಈಗಲೂ ಅದೇ ರೀತಿ ಹುಡುಕುತ್ತಲೇ ಇರುವರು.






## 10

[ ರಾಕ್ಷಸನ ಮಾಯೆಯಿಂದ ನಿಜಸ್ವರೂಪಗಳು ಹೋಗಿ ಒಬ್ಬನು ಶಿಲಾ ಪ್ರತಿಮೆಯಾಗಿಯೂ, ಎರಡನೆಯವನು ಕಪಿಯಾಗಿಯೂ, ಅವಳಿ ಸಹೋದರರು ಹೇಗೆ ಬದಲಾಯಿಸಿದರು, ಮತ್ತೆ ಯಥಾರೂಪವನ್ನು ಹೇಗೆ ಪಡೆದರು ಎಂಬುದನ್ನೂ ರಾಕ್ಷಸನನ್ನು ಕುರಿತು ರಾಜಕುವರಿಯರು ಹೇಳಿದ ರಹಸ್ಯವನ್ನೂ ಓದಿದಿರಿ. ಆತರುವಾಯ....]

ತಮ್ಮ ಹತ್ತಿರ ಇರುವ ಭಸ್ಮಗಳೂ, ಅಂಜನಗಳೂ, ರಾಕ್ಷಸನ ಭೂಗೃಹದಲ್ಲಿ ಕೆಲಸಮಾಡಲಾರವು ಎಂದು ತಿಳಿದಾಗಲಿಂದ ನಮ್ಮ ಅವಳಿ ಮಕ್ಕಳು ಈಗೇನು ಮಾಡುವುದು ಎಂದು ಅತಿ ದೊಡ್ಡ ಪೇಚಿನಲ್ಲಿ ಸಿಲುಕಿದರು. ಹೀಗೆ,ಆಲೋಚಿಸುತ್ತಿರುವಾಗ ಅವರಿಗೆ ಒಂದು ಸಂದೇಹ ಉಂಟಾಯಿತು. ‘ ಈ ರಾಕ್ಷಸ ಪ್ರಪಂಚದಲ್ಲಿ ಎಲ್ಲೆಲ್ಲಿಯೋ ಇರುವ ಅವಳಿ ಮಕ್ಕಳನ್ನು ಕಂಡು ಹಿಡಿಯುತ್ತಾನಲ್ಲ. ಆದರೆ ಇಷ್ಟು ದಿನ ನಮ್ಮ ಗೋಜಿಗೆ ಬಾರದೆ ಸುಮ್ಮನಿರಲು ಕಾರಣವಾದರೂ ಏನಿರಬಹುದು?’ ಎಂದು.

ಮರುದಿನ ಅವರು ರಾಜಕುಮಾರಿಯರನ್ನು ಕಂಡಾಗ ಉದಯನನು ತಮಗೆ ಉಂಟಾದ ಸಂದೇಹವನ್ನು ಹೇಳಲು, ಅವರೂ ಸಹ ಅಚ್ಚರಿಗೊಂಡರು. “ಹೌದು, ಅದೂ ನಿಜವೇ? ನಮಗೆ ಈ ವರೆವಿಗೂ ಈ ಸಂದೇಹವೇ ಬರಲಿಲ್ಲ. ಬಹುಶಃ ಒಂದು ಕಾರಣದಿಂದ ಅವನು ನಿಮ್ಮ ತಂಟೆಗೆ ಬರಲಿಲ್ಲವೆಂದು ನನಗೆ ಈಗ ತೋರುತ್ತಿದೆ. ಹಾಗಾದರೆ....” ಎಂದು ಹೇಳಿ ಸುಮ್ಮನಿದ್ದುಬಿಟ್ಟಳು ಸುಭಾಷಿಣಿ.

“ಪರವಾಯಿಲ್ಲ, ಹೇಳು. ನೀನು ಊಹಿಸಿದ ಕಾರಣವೇ ನಿಜವಾದರೆ, ನಾವು ತಕ್ಕ ಎಚ್ಚರಿಕೆಯಿಂದ ಇರಬಹುದಲ್ಲವೇ?” ಎಂದ ನಿಶೀಥ. ಆಗ ಸುಭಾಷಿಣಿ, “ಮತ್ತೇನೂ ಇಲ್ಲ. ಯಾವುದಾದರೂ ಅವಯವದ ಲೋಪ






ರಾಜಕುಮಾರಿಯರಿಗೆ ವಿವರಿಸಿ ಹೇಳಿದನು. ಅವರು ಈ ರೀತಿ ಮಾತನಾಡಿಕೊಳ್ಳುತ್ತಿರುವಾಗ ರಾಕ್ಷಸನ ಆಗಮನವನ್ನು ಸೂಚಿಸುವ ಸುಂಟರುಗಾಳಿ ಪ್ರಾರಂಭವಾಯಿತು. ಕೂಡಲೇ ರಾಜಕುಮಾರಿಯರು ಕೊಳದೊಳಕ್ಕೆ ಹೊರಟುಹೋದರು. ಆದರೆ ಪಾಪ, ಈ ಸಾರಿ ನಮ್ಮ ಅವಳಿ ಸಹೋದರರು ತಪ್ಪಿಸಿಕೊಳ್ಳಲು ಅಶಕ್ತರಾದರು. ಉದಯನ ತನ್ನ ಹತ್ತಿರವಿದ್ದ ಭಸ್ಮವನ್ನು ತೆಗೆದು, ಎರಚಿಕೊಳ್ಳುವ ವೇಳೆಗೆ ರಾಕ್ಷಸನು ಹಠಾತ್ತನೆ ಪ್ರತ್ಯಕ್ಷವಾಗಿ ಅವರು ಮೂವರನ್ನೂ ಹಿಡಿಯಲ್ಲಿ ಸಿಕ್ಕಿಸಿಕೊಂಡುಬಿಟ್ಟನು.

ವಿದ್ದರೂ ಆ ಅವಳಿ ಮಕ್ಕಳು ರಾಕ್ಷಸನ ಕಾರ್ಯಕ್ಕೆ ಅನುಕೂಲವಾಗುವುದಿಲ್ಲ. ಬಲಿಕೊಡುವ ಸಮಯದಲ್ಲಿ ಈ ವಿಷಯವನ್ನು ತುಂಬಾ ಜಾಗರೂಕತೆಯಿಂದ ಅವನು ಪರಿಶೀಲಿಸುವನು. ನಿಮಗೆ ಅಂತಹ ಲೋಪವೇನೂ ಇರುವಂತೆ ನಮಗೆ ಕಾಣಿಸಲಿಲ್ಲ. ಆದ್ದರಿಂದಲೇ ನಿಮ್ಮನ್ನು ಕೇಳಲು ಸಂಕೋಚಪಟ್ಟೆ" ಎಂದಳು.

ಇದನ್ನು ಕೇಳಿದಕೂಡಲೇ ಅವಳಿ ಸಹೋದರರು ಮೂವರೂ ಒಂದೇ ಸಾರಿ "ನಿನ್ನ ಸಂದೇಹ ಸರಿ" ಎಂದರು.

ತರುವಾಯ ಉದಯನನು ತಾವು ಜನಿಸಿದಾಗಲಿಂದ ತಮ್ಮ ದೃಷ್ಟಿಶಕ್ತಿಯಲ್ಲಿ ಯಾವ ವಿಧವಾದ ಲೋಪವಿತ್ತು, ಅನಂತರ ಗಡ್ಡದವನ ಸಹಾಯದಿಂದ ಅದು ಗುಣವಾದ ರೀತಿ

ನಮ್ಮ ಅವಳಿ ಸಹೋದರರು ಒಳಗೊಳಗೆ ಗಡಗಡ ನಡುಗಿದರೂ ಮೇಲೆ ಮಾತ್ರ ಪೌರುಷವನ್ನು ವ್ಯಕ್ತಪಡಿಸುತ್ತಿದ್ದರು.

ಆಗ ರಾಕ್ಷಸನು "ಯಾರು ನೀವು? ಈ ನನ್ನ ರಹಸ್ಯ ಪ್ರದೇಶಕ್ಕೆ ಬಂದುದಾದರೂ ಹೇಗೆ? ನಿಜ ನುಡಿಯಿರಿ. ಇಲ್ಲವೇ ಹಿಂದೆ ಇಲ್ಲಿಗೆ ಬಂದವರಿಗೆ ಆದ ಗತಿಯೇ ನಿಮಗೂ ಆಗುವುದು" ಎಂದು ಗರ್ಜಿಸಿದನು.

ಅದಕ್ಕೆ ಉದಯನ "ಇಲ್ಲಿಗೆ ಬರುವುದು ಕಷ್ಟಕರವೆಂದೂ, ತುಂಬಾ ಪ್ರಮಾದಕರವೆಂದೂ, ಇಲ್ಲಿಗೆ ಬಂದ ತರುವಾಯ ನಮಗೆ ತಿಳಿಯಿತು. ಹೇಗಿದ್ದರೂ ಪ್ರಾಣಗಳನ್ನು ಲೆಕ್ಕಮಾಡದೆ ಬಂದಿರುವೆವಾದ್ದರಿಂದ ನಾವು ಹೇಳುವ ವಿಷಯ ಕೇಳಿ, ಅನಂತರ ನಿನ್ನ ಇಷ್ಟ ಬಂದಂತೆ ಮಾಡಿಕೋ" ಎಂದನು.



"ಓ ಹೋ, ಹಕ್ಕಿ ಪುಟ್ಟದಾದರೂ ಗಂಟಲು ದೊಡ್ಡದು ಅಂದ ಹಾಗಿದೆಯಲ್ಲಾ ನಿಮ್ಮ ವೈಖರಿ ನೋಡಿದರೆ! ನಮ್ಮ ತಮ್ಮ ನಿಗೆ ಟೋಪಿ ಹಾಕಿದ್ದು ನೀವೇ ಅಲ್ಲವೇ? ಸರಿ, ನೀವು ಈರೀತಿ ಕಳ್ಳತನದಿಂದ ಏಕೆ ಬಂದಿರೋ ಹೇಳಿ ಮೊಟ್ಟಮೊದಲು" ಎಂದು ಗದರಿಸಿದ ರಾಕ್ಷಸ.

"ಅದೇತಪ್ಪು. ನಾವು ಕಳ್ಳತನದಿಂದೇನೂ ಬರಲಿಲ್ಲ, ಹಾಗೆ ಬರಬೇಕಾದ ಅಗತ್ಯವೂ ನಮಗಿಲ್ಲ. ನಾವು ಬಂದ ಕೆಲಸವೇನೆಂದರೆ..." ಎಂದು ಉದಯನ ಏನೋ ಹೇಳುತ್ತಿರುವಲ್ಲಿ,

"ಮತ್ತೇನಿದೆ? ನನಗೆ ಮೋಸ ಮಾಡಲು ತಾನೇ!" ಎಂಬ ಮಾತುಗಳು ಎಲ್ಲಿಂದಲೋ ಕೇಳಿಸಿದುವು. ಆ ಮಾತುಗಳು ಬಂದ ದಿಕ್ಕಿನ ಕಡೆ ನೋಡಲು, ಮೊಟ್ಟಮೊದಲು ತಾವು ಯಾರನ್ನು ಮೋಸಮಾಡಿ, ಗಡ್ಡದವನ ಹತ್ತಿರಕ್ಕೆ ಕಳುಹಿಸಿದ್ದರೋ ಆ ರಾಕ್ಷಸನು ತಮ್ಮ ಕಡೆ ಸರಸರ ನಡೆದುಕೊಂಡು ಬರುವುದು ಕಾಣಿಸಿತು.

ಅವನು ಬಂದಕೂಡಲೇ 'ಅಣ್ಣಾ, ಇವರ ವಿಷಯ ನಾನಿನ್ನು ನೋಡಿಕೊಳ್ಳುತ್ತೇನೆ. ವೃಥಾ ಕಾಲ ಕಳೆಯಬೇಡ. ನೀನು ಬೇಟೆಗೆ ಹೊರಡು" ಎಂದನು.

ಸಹೋದರನು ಈರೀತಿ ಹೇಳಿದಕೂಡಲೇ "ಇದೇನೋ ದೊಡ್ಡಕತೆಯಂತೆ ಕಾಣುತ್ತಿದೆ. ಇವರು ನನ್ನ ತಮ್ಮನಿಗೆ ತಿಳಿದವರೆಂದು



ತೋರುತ್ತದೆ. ಆದುದರಿಂದ ಇವರ ವಿಷಯ ಅವನೇ ನೋಡಿಕೊಳ್ಳುವುದು ಉತ್ತಮ." ಎಂದು ಮತ್ತೆ ಹದ್ದಿನ ರೂಪದಲ್ಲಿ ರಿವ್ವನೆ ಆಕಾಶಮಾರ್ಗದಲ್ಲಿ ಹಾರಿಹೋದನು.

ಆ ಕೂಡಲೇ ರಾಕ್ಷಸನು ಅವಳಿ ಸಹೋದರರನ್ನು ತನ್ನ ಸಂಗಡವೇ, ತಾನು ಕಾವಲು ಕಾಯುವ ಭವನಕ್ಕೆ ಕರೆದುಕೊಂಡು ಹೋದನು. ಅವರನ್ನು ಸಾವಕಾಶವಾಗಿ ಕೂರಿಸಿಕೊಂಡು "ತರುಣರೇ, ಗಡ್ಡದವನಿಗೆ ಟೋಪಿಹಾಕಿದಿರಿ, ನನಗೆ ಟೋಪಿಹಾಕಿದಿರಿ. ಈಗ ನಮ್ಮ ಅಣ್ಣನಿಗೆ ಟೋಪಿ ಹಾಕಲು ಯತ್ನಿಸಿದಿರಿ. ಆದರೆ ನಿಮ್ಮ ಆಟ ಸಾಗದೆ ನನ್ನ ಕೈಯಲ್ಲಿ ಸಿಕ್ಕಿಬಿಟ್ಟಿರುತ್ತೀರಿ. ಗಡ್ಡದವನ ಹತ್ತಿರ ನೀವು ಲಪಟಾಯಿಸಿದ ಅಂಜನಗಳೂ




ಭಸ್ಮಗಳೂ, ವಸ್ತ್ರ ಎಲ್ಲಾ ಇಲ್ಲಿ ಇಡಿ. ತರುವಾಯ ಮಿಕ್ಕ ವಿಷಯ ಮಾತನಾಡೋಣವಂತೆ” ಎಂದನು.

ಏನು ತಾನೇ ಮಾಡುತ್ತಾರೆ, ಪಾಪ, ಅವಳಿಮಕ್ಕಳು. ಆ ವಸ್ತುಗಳನ್ನೆಲ್ಲಾ ಅಲ್ಲಿಟ್ಟುಬಿಟ್ಟರು. ಆಗ ರಾಕ್ಷಸನು “ಹುಡುಗರೇ, ಎಷ್ಟೋ ದಿನಗಳಿಂದ ಕಾವಲು ಕಾಯುತ್ತಿದ್ದೇನೆ. ನನ್ನನ್ನು ತಪ್ಪಿಸಿಕೊಂಡು ಒಳಗೆ ಹೋದವರು ಒಬ್ಬರೂ ಇಲ್ಲ. ಯಾರು ಬಂದರೂ ನನ್ನ ಕೈಗೆ ಸಿಕ್ಕಿಬಿದ್ದು ಶಿಲಾಪ್ರತಿಮೆಗಳಾಗುತ್ತಿದ್ದರು. ಅದೋ ನೋಡಿ, ಅವರೆಲ್ಲಾ ಇನ್ನೂ ಹೇಗೆ ಪಾಡುಪಡುತ್ತಿರುವರೋ! ವಿಷಯ ಈ ರೀತಿ ಇರುವಲ್ಲಿ, ಅಂದು ನೀವು ನನಗೆ ಟೋಪಿ ಹಾಕಿದಾಗಲಿಂದಲೂ ನಾನು ಹೊಟ್ಟೆ ತುಂಬಾ ತಿಂಡಿ ಸಹ ತಿನ್ನುತ್ತಿಲ್ಲ. ತುಂಬಾ ಹಸಿವಾಗಿದೆ. ಈ ತಿಂಗಳ ತಿಂಡಿಯೆಲ್ಲಾ, ನಿಮ್ಮ ಹೆಸರು ಹೇಳಿಕೊಂಡು ಒಟ್ಟಾಗಿ ಕಂಠಪೂರ್ತಿ ಹೊಡೆದು ಬಿಡುತ್ತೇನೆ” ಎಂದು ಹೇಳಿ, ಆ ಮಾಯಾ ವಸ್ತ್ರವನ್ನು ಹಾಸಿ, ಆಹಾರ ಕೋರಿಕೊಂಡನು.

ತನ್ನ ಹೊಟ್ಟೆತುಂಬಿಸಿಕೊಂಡು, ರಾಕ್ಷಸನು ಅವಳಿ ಸಹೋದರರಿಗೂ ಸಹ ಅವುಗಳಲ್ಲಿ ಕೆಲವು ಹಣ್ಣು ಹಂಪಲುಗಳನ್ನು ತಿನ್ನಲು ಕೊಟ್ಟನು. ಅವರೂ ಸಹ ಹೊಟ್ಟೆತುಂಬಿಸಿಕೊಂಡ ತರುವಾಯ, ಆ ರಾಕ್ಷಸನು ಅವರು ಮೂವರನ್ನೂ ಒಂದು ಹಗ್ಗದಿಂದ ಬಂಧಿಸಿ “ಒಂದಿಷ್ಟು ನೀರು ಕುಡಿದು ಬರುತ್ತೇನೆ ಇಲ್ಲೇ ಇರಿ” ಎಂದು ಕೊಳದಕಡೆ ನಡೆದನು.

ಮತ್ತೆ ತುಸ ಸಮಯಕ್ಕೆಲ್ಲಾ ರಾಕ್ಷಸನು ಮೂರು ದೊನ್ನೆಗಳಲ್ಲಿ ನೀರು ತೆಗೆದುಕೊಂಡು ಹಿಂದಿರುಗಿ ಬಂದು, ಅವುಗಳನ್ನು ಸಹೋದರರಿಗೆ ಕೊಟ್ಟನು. ಇದೆಲ್ಲಾ ತಮ್ಮ ಮೇಲಿನ ಅಭಿಮಾನದಿಂದ ಮಾಡುತ್ತಿರುವನೆಂದು ನೆನೆಸಿದರು ಆ ಸಹೋದರರು. ಆದುದರಿಂದ ಅವನು ಕೊಟ್ಟ ನೀರನ್ನು ಗಡಗಡ ಕುಡಿದುಬಿಟ್ಟರು. ನೀರು ಗಂಟಲಲ್ಲಿ ಇಳಿದಕೂಡಲೇ, ಪಾಪ, ಆ ಮೂವರೂ ಮೂರು ಶಿಲಾಪ್ರತಿಮೆಗಳಾಗಿ ಬದಲಾಯಿಸಿಬಿಟ್ಟರು.

ಅವರು ಈ ರೀತಿ ಆದಕೂಡಲೇ ರಾಕ್ಷಸನು ‘ಅಹ್ಹಾಹ್ಹಾಹ್ಹಾ’ ಎಂದು ಆ ಭವನವು

ಅಲ್ಲಾಡುವಂತೆ ಗಹಗಹಿಸಿ ನಗುತ್ತಾ ಆ ಹೊಸ ಶಿಲಾಪ್ರತಿಮೆಗಳನ್ನು ತಾನು ಕಾವಲು ಕಾಯುತ್ತಿದ್ದ ಬಾಗಿಲ ಪಕ್ಕದಲ್ಲಿಟ್ಟನು.

ಇಲ್ಲಿ ಈ ರೀತಿ ನಮ್ಮ ಅವಳಿ ಸಹೋದರರು ಮೂವರೂ ಸಿಕ್ಕಿಕೊಂಡುಬಿಟ್ಟರು. ಇನ್ನು ಅಲ್ಲಿ ದಾನಶೀಲ ಮಹಾರಾಜನೂ, ರಾಣಿ ಪದ್ಮಮುಖಿ ಹೇಗಿರುವರೋ ಒಂದು ಸಾರಿ ನೋಡೋಣ.




ತನ್ನ ಮುದ್ದಿನ ಕುವರಿಯರನ್ನು ಹುಡಿಕಿಕೊಂಡು ಬರಲು ಅವಳಿ ಸಹೋದರರಿಗೆ ಕುದುರೆಗಳನ್ನುಕೊಟ್ಟು ಕಳುಹಿಸಿದ ದಿನವೇ ರಾಜ ಒಂದು ಕೆಲಸ ಮಾಡಿದನು. ಅರಮನೆಯ ಮೇಲಿನ ಅಂತಸ್ತಿನಮೇಲೆ ಒಂದು ವಿಚಿತ್ರವಾದ ಸಣ್ಣ ಕೋಣೆಯನ್ನು ಕಟ್ಟಿಸಿಕೊಂಡನು. ಆ ಕೋಣೆಯಲ್ಲಿ ಕುಳಿತು ನೋಡಿದರೆ ಸುತ್ತಮುತ್ತ ನೋಟಹರಿಯುವಷ್ಟು ದೂರ ಎಲ್ಲಿ ಎಂತಹ ಸಂಚಾರವಿದ್ದರೂ ಸ್ಪಷ್ಟವಾಗಿ ಕಾಣಿಸುತ್ತದೆ. ಈ ಕೋಣೆಯಲ್ಲಿ ಕುಳಿತುಕೊಂಡು ರಾಜ ಇಪ್ಪತ್ತನಾಲ್ಕು ಗಂಟೆಯೂ ನೋಡುತ್ತಿರುವುದೇ ಕೆಲಸವಾಯಿತು.

ಅವಳಿ ಸಹೋದರರು ಹೋಗಿ ಈಗಾಗಲೇ ಐದುವರುಷಗಳಾದವು. ಈ ವರೆವಿಗೂ ಅವರ ಸುಳಿವು ತಿಳಿಯದು. ಅದರಿಂದಾಗಿ ರಾಜನಿಗೆ ದಿನದಿನಕ್ಕೆ ವ್ಯಾಕುಲ ಹೆಚ್ಚುತ್ತಿತ್ತು. ಆದರೂ ಆಶೆ ಪೀಡಿಸುತ್ತಿದ್ದುದರಿಂದ ಆಸ್ಥಾನ ಜೋತಿಷ್ಕನನ್ನು ಕೇಳುತ್ತಿದ್ದನು. "ರಾಜಕುಮಾರಿಯರು ಎಲ್ಲಿಯೋ ಜೀವಿಸುತ್ತಿರುವರೆಂತಲೂ, ಒಂದುದಿನ ಸುಖವಾಗಿ ಹಿಂತಿರುಗುವರೆಂದೂ, ನಿರಾಶೆ ಪಡಬೇಕಾಗಿಲ್ಲವೆಂದೂ ಜೋತಿಷ್ಕನು ಹೇಳುತ್ತಿದ್ದುದರಿಂದ ರಾಜನು ಪ್ರಾಣವನ್ನು ಹೇಗೋ ಉಳಿಸಿಕೊಂಡಿದ್ದನು. ಒಂದು ದಿನ ಬೆಳಗ್ಗೆ ನಸುಕು ಕತ್ತಲೆಯಾಗಿರುವಾಗ ರಾಜನು ಯಥಾಪ್ರಕಾರ ಕೋಣೆಯಲ್ಲಿ ಕುಳಿತುಕೊಂಡು ನೋಡುತ್ತಿದ್ದನು. ಅಮಸುಕು ಬೆಳಕಿನಲ್ಲಿ, ದೂರದಲ್ಲಿ ಎರಡು ಅಶ್ವಗಳು ಶರವೇಗದಿಂದ ತನ್ನ ಅರಮನೆಕಡೆ ಬರುವುದು ಕಂಡು ಬಂತು. ಆ ಕುದುರೆಗಳ ಬಣ್ಣ, ಅವುಗಳಮೇಲಿದ್ದ ಮನುಷ್ಯರ ಆಕಾರಗಳ ಮಾತು ಒತ್ತೊಟ್ಟಿಗಿರಲಿ, ಅವುಗಳಿಗೆ ಕಟ್ಟಿದ್ದ ಕರಿ ಪತಾಕೆಗಳನ್ನು ಕಂಡಕೂಡಲೇ ರಾಜನು




ಏನೋ ನೆನೆಸಿಕೊಂಡು ಕಿಟ್ಟನೆಕಿರುಚಿ ಬಾಕಿನಿಂದ ತಿವಿದುಕೊಳ್ಳಲು ಯತ್ನಿಸಿದನು. ದೈವವಶಾತ್ ಅವನಕೂಗನ್ನು ಕೇಳಿದ ಸೇವಕರು ಎವೆಯಿಕ್ಕುವಷ್ಟರಲ್ಲಿ ಅಲ್ಲಿಗೆ ಬಂದವರಾಗಿ, ಆ ಪ್ರಮಾದ ತಪ್ಪಿತು. ಆದರೆ ರಾಜನು ಮೂರ್ಛೆ ಹೊಂದಿದನು.

ಕೆಲ ಹೊತ್ತಿಗೆಲ್ಲಾ ರಾಜನು ಎಚ್ಚರಗೊಳ್ಳುವುದೂ, ಆ ಎರಡು ಕುದುರೆಗಳು ಅಲ್ಲಿಗೆ ಬರುವುದೂ ಒಂದೇ ಸಾರಿ ಸಂಭವಿಸಿತು.

ಅಲ್ಲಿಗೆ ಬಂದ ಅಶ್ವಗಳು ಅವಳಿ ಸಹೋದರರಿಗೆ ತಾನು ಕೊಟ್ಟುಕಳುಹಿಸಿದ ಅಶ್ವಗಳು. ಆದರೂ ಅವುಗಳಮೇಲೆ ಬಂದವರು ಅವಳಿ ಸಹೋದರರಲ್ಲ; ತನ್ನ ಸೈನಿಕರು!

ಅವರ ಹತ್ತಿರಕ್ಕೆ ರಾಜನು ಆತುರದಿಂದ ಓಡಿಹೋಗಿ "ರಾಜಕುಮಾರಿಯರೆಲ್ಲಿ? ಆ ಅವಳಿ ಸಹೋದರರೆಲ್ಲಿ? ಈ ಅಶ್ವಗಳು ನಿಮಗೆಲ್ಲಿ ಸಿಕ್ಕಿದವು?" ಎಂದು ಪ್ರಶ್ನೆಗಳ ಮಳೆ ಸುರಿಸಿದನು.

ಅದಕ್ಕೆ ಸೇವಕರು "ಮಹಾರಾಜರೇ, ಕ್ಷಮಿಸಿರಿ. ರಾಜಕುಮಾರಿಯರ ವಿಷಯವಾಗಲೀ, ಆ ಹುಡುಗರ ಸಂಗತಿಯಾಗಲೀ ನಮಗೇನೂ ತಿಳಿಯದು. ಊರೂರು ಹುಡುಕುತ್ತಾ ನಾವು ಹೋಗಲು, ಒಂದಾನೊಂದು ಮೈದಾನದಲ್ಲಿ ಈ ಅಶ್ವಗಳು ನಮಗೆ

ಕಾಣಿಸಿದವು. ಇವುಗಳನ್ನುಕೂಡಲೇ ಗುರುತು ಹಿಡಿದು ನಮ್ಮ ರಾಜಕುಮಾರಿಯರೂ, ಆ ಅವಳಿ ಸಹೋದರರೂ ಕಾಣಿಸುವರೇನೋ ಎಂದು ಆ ಪ್ರದೇಶವನ್ನೆಲ್ಲಾ ಹುಡುಕಿದೆವು. ಏನು ಮಾಡಿದರೂ ಅವರ ಸುಳಿವು ತಿಳಿಯದಾಗಲು, ಒಂದು ವೇಳೆ ಅವರು ಅರಮನೆಗೆ ಬಂದು ಸೇರಿದರೋ ನೋಡೋಣ, ಇಲ್ಲ, ಈ ಸಮಾಚಾರವನ್ನಾದರೂ ಪ್ರಭುಗಳಲ್ಲಿ ಅರಿಕೆ ಮಾಡೋಣಅಂತ ಬಂದೆವು, ಮಹಾಸ್ವಾಮಿ" ಎಂದು ಬಿನ್ನವಿಸಿಕೊಂಡರು. ಎಲ್ಲವನ್ನೂ ಕೇಳಿ "ಅಷ್ಟೊಂದು ಅದೃಷ್ಟ ನನಗಿದೆಯೇ" ಎಂದು ರಾಜ ಮತ್ತೆ ದುಃಖದಿಂದ ಮೂರ್ಛೆಗೊಂಡನು. ಎಲ್ಲರೂ ಸೇರಿ ರಾಜನಿಗೆ ಧೈರ್ಯಹೇಳಿ ಸಮಾಧಾನ ಮಾಡಲು, ಮತ್ತೆ ಮನಸ್ಸಿಗೆ ಕ್ಷಣಕಾಲ ನೆಮ್ಮದಿಯಾಗಿ,ಅಶ್ವಗಳ ಮೇಲೇರಿ ಬಂದಿದ್ದ ಸೈನಿಕರನ್ನು ಕರೆಸಿ "ಎಲೈ ಬೆಪ್ಪುತಕ್ಕಡಿಗಳೇ, ರಾಜಕುಮಾರಿಯರನ್ನು ಹುಡುಕಿಕೊಂಡು ಬರದೆ ಏಕೆ ಬಂದಿರಿ ನೀವು? ಅವರನ್ನು ಹುಡುಕಲು ಹೋದ ಅವಳಿ ಮಕ್ಕಳ ಗತಿ ಏನಾಯಿತೋ, ಪಾಪ, ಆ ಎಳೆ ಕಂದಮ್ಮಗಳು ಯಾವ ಆಪತ್ತಿನಲ್ಲಿ ಸಿಲುಕಿಕೊಂಡರೋ, ಇಲ್ಲದಿದ್ದಪಕ್ಷಕ್ಕೆ ಅವರ ಸುಳಿವು ಇದುವರೆವಿಗೂ ತಿಳಿಯದೆಂದರೇನು? ನನಗೆ ಜೀವನ ಬೇಸರವಾಗಿದೆ. ಕ್ಷಣವಾದರೂ ಶಾಂತಿಯಿಲ್ಲ ಮನಸ್ಸಿಗೆ. ಮತ್ತೆ ನೀವು ಬೇಗ ಬರುವ ಆಶೆಯಿದೆಯೆ? ಹೇಗೋ ಏನೋ, ನೀವು ಹಿಂದಿರುಗುವಲ್ಲಿ ನನ್ನ ಸ್ಥಿತಿ ಹೇಗಿರುತ್ತೋ.... ಹೋಗಿಬನ್ನಿ" ಎಂದು ಅವರನ್ನು ಕಳುಹಿಸಿದನು. ಈ ಸೇವಕರು ಬಂದುಹೋದ ವಿಷಯ ಆ ಬಾಯಿಂದ ಈ ಬಾಯಿಂದ ಅಂತಃಪುರಕ್ಕೆ ಹಬ್ಬಿ ತುಸು ಚೇತರಿಸಿಕೊಂಡಿದ್ದ ರಾಣಿಗೆ ಮುಟ್ಟಿ, ಮತ್ತೆ ಹುಚ್ಚು ಹಿಡಿಯಿತು ಆಕೆಗೆ.

[ಅಲ್ಲಿ ನಮ್ಮ ಸಹೋದರರ ಗತಿ ಏನಾಯಿತು? ಅವರು ಶಿಲಾಪ್ರತಿಮೆಗಳಾಗಿಯೇ ಇದ್ದು ಬಿಟ್ಟರೇ? ಹೀಗಾದುದು ರಾಜಕುಮಾರಿಯರಿಗೆ ತಿಳಿಯುವುದೇ ಇಲ್ಲವೇ? ಈ ಸಮಸ್ಯೆಗಳೆಲ್ಲಾ ಬರುವ ತಿಂಗಳು ಓದಿ.]





# ಪುಷ್ಪಗಿರಿ

ಬಹಳದಿನಗಳ ಹಿಂದೆ ದಕ್ಷಿಣ ದೇಶದ ಒಂದು ಗ್ರಾಮದಲ್ಲಿ ನಿಷ್ಠಾವಂತನಾದ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ದಿವ್ಯಕ್ಷೇತ್ರಗಳನ್ನು ದರ್ಶನಮಾಡಿ, ಪುಣ್ಯನದಿಗಳಲ್ಲಿ ಸ್ನಾನಮಾಡಿ, ಮುಕ್ತಿ ಪಡೆಯುವ ಆಸಕ್ತಿ ಬಹಳವಾಗಿತ್ತು. ಆದರೆ ಆತ ಕಡುಬಡವ. ಆದುದರಿಂದ ಆತನ ಅಭಿಲಾಷೆ ನೆರವೇರುವುದು ಸಾಧ್ಯವಾಗಲಿಲ್ಲ.

ಇಷ್ಟರಲ್ಲಿ ಆ ಬ್ರಾಹ್ಮಣನಿಗೆ ಅವಸಾನಕಾಲ ಪ್ರಾಪ್ತವಾಗಲು, ತನ್ನ ಒಬ್ಬನೇ ಮಗನಾದ ರಂಗಣ್ಣನನ್ನು ಹತ್ತಿರಕ್ಕೆ ಕರೆದು "ಅಪ್ಪಾ, ಎಷ್ಟೋ ಪ್ರಯತ್ನ ಮಾಡಿದರೂ ನನ್ನ ಜೀವಮಾನದಲ್ಲಿ ತೀರ್ಥಯಾತ್ರೆಮಾಡುವುದಾಗಲೀ, ಪುಣ್ಯನದಿಗಳಲ್ಲಿ ಸ್ನಾನ ಮಾಡುವುದಾಗಲೀ ಸಾಧ್ಯವಾಗಲಿಲ್ಲ. ಆದ್ದರಿಂದ ನಿನಗಾದರೂ ಅವಕಾಶ ಸಿಕ್ಕಿದರೆ, ನನ್ನ ಅಸ್ಥಿಗಳನ್ನು ಸಾಧ್ಯವಾದಷ್ಟು ಪುಣ್ಯನದಿಗಳಲ್ಲಿ ವಿಸರ್ಜಿಸಬೇಕು. ಮುಖ್ಯವಾಗಿ ಪವಿತ್ರವಾದ ಗಂಗಾನದಿಯಲ್ಲಿ ವಿಸರ್ಜನೆಮಾಡು. ನೀನು ಈ ಒಂದು ಕೆಲಸ ಮಾಡಿದರೆ ನನ್ನ ಆತ್ಮ ಸಂತೃಪ್ತಿಪಡೆಯುವುದು. ನನಗೂ ಮುಕ್ತಿದೊರೆಯುವುದು." ಎಂದು ತನ್ನ ಕಡೇ ಕೋರಿಕೆಯನ್ನು ತಿಳಿಸಿ ದೇಹ ನೀಗಿದನು.

ರಂಗಣ್ಣ ಪಿತೃಭಕ್ತಿಯುಳ್ಳವನು. ಸಾಲವೋ ಸೋಲವೋ ಮಾಡಿಯಾದರೂ ಸರಿ, ತಂದೆಯ ಕೊನೆಕೋರಿಕೆ ನೆರವೇರಿಸಬೇಕು, ಮಗನೆನ್ನಿಸಿಕೊಂಡು ಇಷ್ಟುಮಾತ್ರ ಮಾಡದಿದ್ದರೆ ನನ್ನ ಜನ್ಮ ಒಂದು ಜನ್ಮವೇ? ಎಂಬ ಸಂಕಲ್ಪದಿಂದ ಹೊರಟು ಎಷ್ಟೋ ಕಷ್ಟಗಳನ್ನಾದರೂ ಸಹಿಸಿ ಕಾಶೀ ಕ್ಷೇತ್ರವನ್ನು ದರ್ಶನಮಾಡಿ, ತಂದೆಯ ಅಸ್ಥಿಗಳನ್ನು ಗಂಗಾನದಿಯಲ್ಲಿ ವಿಸರ್ಜಿಸಲು ನಿಶ್ಚಯಿಸಿಕೊಂಡನು.

ಆಗಿನ ಕಾಲದಲ್ಲಿ ಈಗಿರುವಂತೆ ರೈಲು ವಿಮಾನಗಳಿತ್ತೇ, ಹೀಗೆ ಹೋಗಿ ಹಾಗೆ ಬರಲು? ಕಾಲು ನಡಿಗೆಯಿಂದಲೇ ಮಹಾರಣ್ಯಗಳನ್ನು ದಾಟಬೇಕು. ದಾರಿಯಲ್ಲಿ ಕಷ್ಟಸುಖಗಳನ್ನು ಸಹಿಸಬೇಕು. ಇಷ್ಟಾದರೂ ಹೊರಟ ಮನುಷ್ಯ ಮತ್ತೆ ಹಿಂತಿರುಗುವವರೆವಿಗೂ ಬದುಕಿರುವನೆಂಬ ನಂಬಿಕೆಯಿಲ್ಲ.

ತೆಲಗು ಕಥೆಯಿಂದ.

ಆದುದರಿಂದಲೇ ‘ಕಾಶಿಗೆ ಹೋದವನೂ, ಸ್ಮಶಾನಕ್ಕೆ ಹೋದವನೂ, ಮರಳಿಬಾರ’ ಎಂಬ ಮಾತು ಗಾದೆಯಾಗಿತ್ತು.

ರಂಗಣ್ಣ ಪಾದಚಾರಿಯಾಗಿ ಹೊರಟನು. ದಿನಕ್ಕೊಂದು ಗ್ರಾಮದಂತೆ ಸಂಚಾರ ಮಾಡುತ್ತಾ, ದಾರಿಯಲ್ಲಿ ಸಿಕ್ಕಿದ ಕ್ಷೇತ್ರಗಳೆಲ್ಲವನ್ನೂ ದರ್ಶನಮಾಡುತ್ತಾ ಪರಲೋಕದಲ್ಲಿದ್ದ ತಂದೆಗೆ ಗತಿ ಕಾಣಿಸುತ್ತಾ ಮುಂದೆ ಹೋಗುತ್ತಿದ್ದನು. ಹೀಗೆ ಹೋಗಿಹೋಗಿ ಆತನು ಕಡಪ ಜಿಲ್ಲೆಯಲ್ಲಿ ಕಾಲಿಟ್ಟ. ಅಲ್ಲಿ ಪಿನಾಕಿನಿ ನದಿ ಹರಿಯುತ್ತದೆ. “ಸರಿ, ಇದರಲ್ಲೂ ಸಹ ಸ್ನಾನ ಮಾಡಿಕೊಂಡು ಹೋಗೋಣ” ಎಂದು ಅಸ್ಥಿಯ ಗಂಟನ್ನು ಅಲ್ಲೇ ಹತ್ತಿರದಲ್ಲಿಟ್ಟು ರಂಗಣ್ಣ ನದಿಯಲ್ಲಿ ಇಳಿದ.

ಆತನು ಸ್ನಾನಮಾಡಿ, ಸಂಧ್ಯಾವಂದನೆ ತೀರಿಸಿಕೊಂಡು ಬಂದು, ಮತ್ತೆ ಗಂಟನ್ನು ಭುಜದಮೇಲಿಟ್ಟುಕೊಂಡು ಮುಂದಕ್ಕೆ ಹೋಗೋಣ ಅಂತಿದ್ದ. ಹಾಗೇ ನೋಡುತ್ತಿರುವಲ್ಲಿ ಪಿನಾಕಿನಿನದಿ ಉಕ್ಕಿಬಂದು ಆ ಮೂಟೆಯೆಲ್ಲವೂ ಒದ್ದೆಯಾಗಿಬಿಟ್ಟಿತು. ಸರಿ, ಆ ಒದ್ದೆಬಟ್ಟೆಯನ್ನು ಒಣಗಿಸಿ, ಮತ್ತೆ ಕಟ್ಟೋಣವೆಂಬ ಉದ್ದೇಶದಿಂದ ಮೂಟೆ ಬಿಚ್ಚಿದ.

ಮೂಟೆ ಬಿಚ್ಚಿದರೆ ಅಸ್ಥಿಗಳು ಮಾಯವಾಗಿ, ಅದರ ಬದಲು ಗಮಗಮ ಅಂತ ಸುವಾಸನೆ ಬೀರುವ ಬಿಳಿಯ ಮಲ್ಲಿಗೆ ಕಾಣಿಸಿತು. ಇದನ್ನು ಕಂಡು ರಂಗಣ್ಣ ಆಶ್ಚರ್ಯಚಕಿತನಾದ. “ಆಹಾ, ಪಿನಾಕಿನಿ ಜಲ ಎಂತಹ ಮಹಿಮೆಯುಳ್ಳದ್ದು! ಕಾಶಿಯಲ್ಲಿರುವ ಗಂಗಾ ಜಲದ ಮಾಹಾತ್ಮ್ಯ ಎಂತಹದೋ ನಾನರಿಯೆ. ಆದರೆ ಈ ಪಿನಾಕಿನಿಯ ಮಹಿಮೆ ಕಣ್ಣಾರೆ ಕಂಡೆ. ನನ್ನ ತಂದೆಗೆ ಮುಕ್ತಿಲಭಿಸಿತು. ನಾನು ನನ್ನ ಕರ್ತವ್ಯಪಾಲಿಸಿದಂತೆ ಆಯಿತು. ಇನ್ನು ನಾನು ಕಾಶಿಗೆ ಹೋಗುವ ಅಗತ್ಯವಿಲ್ಲ. ಇಲ್ಲಿಯೇ ಧನ್ಯನಾದೆ” ಎಂದು ಅಮಿತ ಆನಂದದಿಂದ ತಂದೆಯನ್ನು ನೆನಸುತ್ತ ಪುಷ್ಪಗಳನ್ನು ಪಿನಾಕಿನಿ ಪ್ರವಾಹದಲ್ಲಿ ಕಲೆಸಿ ಮನೆಕಡೆಗೆ ಹಿಂತಿರುಗಿದನು.



ಅದೇನು ವಿಚಿತ್ರವೋ, ರಂಗಣ್ಣ ಸ್ನಾನ ಮಾಡಿದ ಸ್ಥಳ ಒಂದು ಕೊಳವಾಯಿತು. ಆ ಕೊಳ ತುಂಬಾ ಸೌಕರ್ಯವಾಗಿದ್ದುದರಿಂದ



ಸ್ತ್ರೀಯರೆಲ್ಲರೂ ಅಲ್ಲಿ ಸ್ನಾನಮಾಡಿ, ನೀರು ತೆಗೆದುಕೊಂಡು ಹೋಗುತ್ತಿದ್ದರು. ದನಕರು ಗಳೂ ಸಹ ಬಂದು ಬಾಯಾರಿಕೆ ಪರಿಹಾರ ಮಾಡಿಕೊಳ್ಳುತ್ತಿದ್ದವು.

ಒಂದು ದಿನ ಒಬ್ಬ ಮುದುಕ ದನಗಳಿಗೆ ನೀರು ಕುಡಿಸಲು ಆಕೊಳದ ಹತ್ತಿರಕ್ಕೆಬಂದ. ತುಂಬಾ ಬಡವಾಗಿದ್ದ ಆ ಪಶುಗಳು ಕೊಳ ದಲ್ಲಿ ನೀರು ಕುಡಿದು ಹೊರಗೆ ಬಂದಕೂಡಲೇ ತಳತಳನೆ ಹೊಳೆಯುತ್ತಾ ಬಲವಾಗಿಯೂ, ಎಳೆಸಾಗಿಯೂ ಕಾಣಿಸಿದವು. ಈ ಆಶ್ಚರ್ಯ ವನ್ನು ನೋಡಿ, ತಾತನಿಗೆ ಭ್ರಮೆಯುಂಟಾ ಯಿತು. ತನ್ನ ದನಗಳು ಎಳೆಯವಾದವೆಂಬ ಸಂತೋಷದಿಂದ ತಾನೂ ಸಹ ಕೊಳದಲ್ಲಿ ಇಳಿದು ಸ್ನಾನ ಮಾಡಿದ. ಸ್ನಾನ ಮಾಡಿ ದಂಡೆಯಮೇಲೆ ಬಂದಕೂಡಲೇ ತಾತನ ಮುದಿರೂಪ ಮಾಯವಾಗಿ ಯುವಕನಾದ.

ಅದೇ ಸಮಯಕ್ಕೆ ಸರಿಯಾಗಿ ಆ ಮುದು ಕನ ಹೆಂಡತಿ ತಲೆಯಮೇಲೆ ಬುತ್ತಿ ಎತ್ತಿ ಕೊಂಡು, ಆ ದಾರಿಯಲ್ಲಿ ಹೊಲಕ್ಕೆ ಹೋಗು ತ್ತಿದ್ದಳು. ಹಾಗೆ ಹೋಗುತ್ತಿರುವಾಕೆಯನ್ನು ಆತನು ಮಾತನಾಡಿಸಲು, ಯಾರೋ ಪೋಕರಿ ತನ್ನೊಂದಿಗೆ ಸರಸವಾಡುತ್ತಿರುವನೆಂದು, ಎದುರಿಸಿ ಜವಾಬು ಕೊಟ್ಟಳು. "ನಾನು ನಿನ್ನ ಗಂಡ ನಲ್ಲವೆ? ಚೆನ್ನಾಗಿ ನೋಡಿ ಗುರುತು ಹಿಡಿಯಲಾರೆಯಾ? ನಾನೇ ಪಲಾನ ಮುದು ಕ" ಎಂದು ಎಷ್ಟುಹೇಳಿದರೂ ಆಕೆ ನಂಬ ಲಿಲ್ಲ. ಆಗ ಆತನು ಆಕೆಯ ಕೈಹಿಡಿದು ಕೊಂಡು ದರದರನೆ ಎಳೆದುಕೊಂಡು ಹೋಗಿ ಕೊಳದಲ್ಲಿ ಮುಳುಗಿಸಿದ. ಇನ್ನೇನು? ಹೊರಗೆ ಬರುವವೇಳೆಗೆ ಆಕೆ ರೂಪವತಿಯೂ, ಜವ್ವನೆಯೂ ಆಗಿಬಿಟ್ಟಳು. ಮುದುಕ ಮತ್ತು ಆತನ ಮಡದಿ ಒಟ್ಟಿಗೆ ಮನೆಗೆ ಹೋದರೂ, ಅವರ ಮಕ್ಕಳು ತಂದೆ ತಾಯಿಗಳ ಗುರುತು ಹಿಡಿಯಲಾರದೆ ಹೋದರು. ತರುವಾಯ ಕ್ರಮೇಣ ನಿಜಾನಿಜಗಳು ಹರಡಿ, ಪಿನಾಕಿನಿ ಜಲದ ಮಹಿಮೆ ಎಲ್ಲರಿಗೂ ತಿಳಿದು ಹೋ ಯಿತು. ಅಂದಿನಿಂದ ಆ ಕೊಳದಲ್ಲಿ ಸ್ನಾನ ಮಾಡಿ, ಪ್ರಜೆಗಳು ಅಮರತ್ವ ಪಡೆಯುವುದು ಪ್ರಾರಂಭವಾಯಿತು.

ಕೆಲಕಾಲದ ತರುವಾಯ ಈ ಸುದ್ಧಿ



ತ್ರಿಲೋಕಸಂಚಾರಿಯಾದ ನಾರದಮಹರ್ಷಿಯ ಕಿವಿಗೆ ಬಿತ್ತು. ಯಾರಿಗಾದರೂ ಒಳ್ಳೆಯದಾಗುತ್ತಿದ್ದರೆ ಸಹಿಸಲಾರದ ನಾರದನು, ಇಷ್ಟು ಜನ ಅಮರತ್ವ ಹೊಂದುತ್ತಿದ್ದರೆ ನೋಡಿ ಸಹಿಸಬಲ್ಲನೇ? ಊಹೂಂ. ಆದ್ದರಿಂದ 'ಈ ಕೊಳಕ್ಕೆ ಯಾವ ವಿಧವಾದ ಶಾಸನ ವಿಧಿಸೋಣ?' ಎಂದು ಯೋಚಿಸಿ, ನೆಟ್ಟಗೆ ಬ್ರಹ್ಮದೇವನ ಹತ್ತಿರಕ್ಕೆ ಹೋಗಿ ಸಂಗತಿ ಸಂದರ್ಭಗಳನ್ನು ತಿಳಿಸಿದ.

"ಭೂಲೋಕದಲ್ಲಿ ಇಂತಹ ಕೊಳ ಹೇಗೆ ಹುಟ್ಟಿತು." ಎಂದು ದಿವ್ಯದೃಷ್ಟಿಯಿಂದ ನೋಡಿದ ಬ್ರಹ್ಮ. ಪೂರ್ವಕಾಲದಲ್ಲಿ ತನ್ನ ತಾಯಿಯ ದಾಸ್ಯವಿಮುಕ್ತಿಗಾಗಿ ಗರುತ್ಮಂತನು ದೇವಲೋಕದಿಂದ ಅಮೃತವನ್ನು ತೆಗೆದುಕೊಂಡು ಹೋಗುತ್ತಿರಲು ದೇವೇಂದ್ರನು ಅಡ್ಡಿಮಾಡಿದನಂತೆ. ಆಗ ಅವರಿಬ್ಬರ ನಡುವೆ ಭಯಂಕರ ಯುದ್ಧ ನಡೆಯಿತು. ಆ ಹೊಡೆದಾಟದಲ್ಲಿ ಅಮೃತಬಿಂದು ಒಂದು ತುಳುಕಿ ಆ ಕೊಳವಿದ್ದೆಡೆ ಬಿದ್ದಿತೆಂಬ ಪೂರ್ವ ವಿಚಾರವನ್ನು ಗ್ರಹಿಸಿದ.

ನಾರದನು ಒಂದೇ ಸವನೆ ಚುಚ್ಚಿ ಹೇಳಲು ಅಮರತ್ವಕೊಡುವಂತಹ ಕೊಳ ಭೂಲೋಕದಲ್ಲಿರಕೂಡದೆಂದು ಬ್ರಹ್ಮನಿಗೂ ಅಭಿಪ್ರಾಯವುಂಟಾಯಿತು. ಕೂಡಲೇ ಬ್ರಹ್ಮನು ಹನುಮಂತನನ್ನು ಕರೆಸಿ "ಹನೂ, ಒಂದು ಪರ್ವತ ತಂದು ಪಿನಾಕಿನಿಯಲ್ಲಿರುವ ಆ ಕೊಳವನ್ನು ಮುಚ್ಚಿಬಿಡು" ಎಂದ. ಹೇಳಿದ್ದೇ ತಡ, ಆಂಜನೇಯ ಬ್ರಹ್ಮಾಂಡವಾದ ಪರ್ವತವೊಂದನ್ನು ತಂದು ಧಬಾರನೆ ಆ ಕೊಳದಲ್ಲಿ ಹಾಕಿದ. ಆದರೆ ಆ ಪಿನಾಕಿನಿಯ ಬಲವೆಂತಹುದೋ ಏನೋ, ಹನುಮಂತನು ಬೀಳಿಸಿದ ಪರ್ವತ ಕೊಳವನ್ನು ಮುಚ್ಚುವ ಬದಲು ಚೆಂಡಿನಂತೆ ನೀರಿನಮೇಲೆ ತೇಲುತಿತ್ತು.

ಈ ವಿಚಿತ್ರವನ್ನು ಕಂಡು ಬ್ರಹ್ಮನಿಗೂ ಚಿಂತೆ ಹುಟ್ಟಿತು. ಆತನಿಗೆ ಏನೂ ತೋರದೆ ನಾರದನನ್ನು ಸಂಗಡ ಕರೆದುಕೊಂಡು ನೆಟ್ಟಗೆ ಶಿವನ ಹತ್ತಿರಕ್ಕೆ ಹೋದ. ಶಿವನಿಗೂ ಈ ವಿಷಯದಲ್ಲಿ ಏನೂ ಬುದ್ಧಿ ಓಡಲಿಲ್ಲ. ಆ ಮೂವರೂ ಒಟ್ಟಿಗೆ ವೈಕುಂಠದಲ್ಲಿದ್ದ ವಿಷ್ಣುವಿನಲ್ಲಿಗೆ ನಡೆದು, ವಿಷಯವನ್ನೆಲ್ಲಾ ಮಣ

ಪೋಣಿಸಿದಂತೆ ಆ ಜಗನ್ನಾಟಕ ಸೂತ್ರಧಾರಿಗೆ ತಿಳಿಸಿದರು. ವಿಷ್ಣು ಕಿರುನಗೆ ಬೀರುತ್ತಾ ಎಲ್ಲವನ್ನೂ ಕೇಳಿ "ನನಗೂ ಶಿವನಿಗೂ ಸದಾ ಇಂತಹ ಸಮಸ್ಯೆಗಳು ಬರುತ್ತಿರುತ್ತವೆ. ಸುಮ್ಮನೆ ಇರಗೊಡಿಸಲಾರನಲ್ಲಾ ಈ ನಾರದ" ಎಂದು ಹೇಳಿ, ಬ್ರಹ್ಮ, ನಾರದರನ್ನು ಕಳುಹಿಸಿಬಿಟ್ಟ. ತರುವಾಯ ಶಿವಕೇಶವರು ಮಾನವರೂಪದಲ್ಲಿ ಭೂಲೋಕಕ್ಕೆ ಇಳಿದು ಬಂದು ಆ ಕೊಳದಮೇಲೆ ತೇಲುತ್ತಿದ್ದ ಪರ್ವತವನ್ನು ಒಂದುಕಡೆ ಶಿವನೂ, ಮತ್ತೊಂದುಕಡೆ ಕೇಶವನೂ ಅದುಮಿಹಿಡಿದು ಅಣಗಿಸಿದರು.

ಆಗ ಅವರ ಪ್ರಭಾವದಿಂದ ಆ ಪರ್ವತ ಭೂಮಿಯ ಮೇಲೆ ಉಳಿದು, ಕೊಳ ಮುಚಿಕೊಂಡಿತು.

ಬ್ರಾಹ್ಮಣನ ಅಸ್ಥಿಗಳನ್ನು ಹೂವಿನಂತ್ಹೆ ಬದಲಾಯಿಸುವ ಮಹಿಮೆಯಿತ್ತು ಪಿನಾಕಿನಿ ನದಿನೀರಿಗೆ. ಅಂತಹ ನೀರಿನಲ್ಲಿ ಆಂಜನೇಯ ಪರ್ವತ ತಂದು ಹಾಕಿದ. ಈ ಎರಡು ಕಾರಣಗಳಿಂದ ಆ ಪರ್ವತಕ್ಕೆ 'ಪುಷ್ಪಗಿರಿ' ಎಂದು ಹೆಸರು ಬಂದಿತೆಂದು ಹೇಳುವರು. ಶಿವಕೇಶವರಿಬ್ಬರೂ ದೇವಲೋಕದಿಂದ ಇಳಿದು ಬಂದು ಆ ಪರ್ವತವನ್ನು ಅಣಗಿಸಿದರಾದುದರಿಂದ ಬೆಟ್ಟದ ಎರಡು ಕಡೆಗಳಲ್ಲೂ ಅವರಿಬ್ಬರ ಆಲಯಗಳು ನೆಲೆಸಿ ಅದು ಈ ದಿನ ಒಂದು ದಿವ್ಯಕ್ಷೇತ್ರವೆನಿಸಿಕೊಂಡಿತು. ಇಲ್ಲಿ ವರ್ಷ ವರ್ಷ ಭಾರಿ ಉತ್ಸವಗಳು ನಡೆಯುತ್ತವೆ. ಲಕ್ಷಾಂತರ ಜನ ದೇವರ ದರ್ಶನಕ್ಕಾಗಿ ಬರುವರು. ಇದೊಂದು ಹೇಳಿಕೊಳ್ಳಬಹುದಾದಂತಹ ಪುಣ್ಯಕ್ಷೇತ್ರವಾದುದರಿಂದಲೇ ಪುಷ್ಪಗಿರಿ ಸ್ವಾಮಿಗಳು ಅಲ್ಲಿ ಒಂದು ಮಠವನ್ನು ಪ್ರಾರಂಭಿಸಿದ್ದಾರೆ.

ಪುಷ್ಪಗಿರಿ ಕಡಪಕ್ಕೆ ಹತ್ತು ಮೈಲಿದೂರದಲ್ಲಿ ಇರುವುದು. ಈ ಸಾರಿ ನೀವು ಅತ್ತಕಡೆ ಹೋದಾಗ ತಪ್ಪದೆ ಈ ಕ್ಷೇತ್ರವನ್ನು ಸಂದರ್ಶಿಸಿಕೊಂಡು ಬನ್ನಿರಿ.






ಲಚ್ಚಿರೆಡ್ಡಿಪಾಳ್ಯದಲ್ಲಿ ದೊಡ್ಡ ಲಕ್ಕಪ್ಪ, ಚಿಕ್ಕ ಲಕ್ಕಪ್ಪ ಎಂಬ ಇಬ್ಬರು ಅಣ್ಣತಮ್ಮಂದಿರಿದ್ದರು. ಅವರಿಬ್ಬರೂ ಬಡವರು. ಸೌದೆಹೊರೆ ಮಾರಿಕೊಂಡು ಪ್ರತಿದಿನಾ ತಲಾ ಒಂದೊಂದು ಪಾವಲಿ ಸಂಪಾದಿಸಿಕೊಳ್ಳುತ್ತಿದ್ದರು. ದೊಡ್ಡ ಲಕ್ಕಪ್ಪ ತಾನು ಸಂಪಾದಿಸಿದ ಪಾವಲಿಯಲ್ಲಿ ಎರಡಾಣೆ ಸಂಸಾರಕ್ಕಾಗಿ ವಿನಿಯೋಗಿಸಿ, ಮಿಕ್ಕ ಎರಡಾಣೆಯನ್ನು ಕೂಡಿಡುತ್ತಿದ್ದ. ಚಿಕ್ಕ ಲಕ್ಕಪ್ಪ ಮದುವೆಯನ್ನೇ ಮಾಡಿಕೊಂಡಿರಲಿಲ್ಲ. ಹುಡುಗಿಯನ್ನು ಕೊಡುತ್ತೇವೆಂದು ಯಾರು ಬಂದರೂ "ಮದುವೆಯಾದರೆ ನವಾಬನ ಮಗಳನ್ನು ಮಾಡಿಕೊಳ್ಳಬೇಕು" ಎಂದು ಹೇಳಿ ಅಲ್ಲಿನಿಲ್ಲದೆ ಮುಂದಕ್ಕೆ ಹೊರಟುಬಿಡುತ್ತಿದ್ದ. "ಪಾವಲಿ ಹಣಕ್ಕೆ ಗತಿಯಿಲ್ಲದವ. ನವಾಬನ ಮಗಳನ್ನು ಮದುವೆ ಆಗ್ತಾನಂತೆ" ಎಂದು ಎಲ್ಲರೂ ಪರಿಹಾಸಮಾಡುತ್ತಿದ್ದರು.

ಚಿಕ್ಕಲಕ್ಕಪ್ಪ ಸಂಪಾದಿಸುತ್ತಿದ್ದ ಪಾವಲಿಯಲ್ಲಿ ಮೂರಾಣೆ ಗಳಿಗೆ ತಿಂಡಿತಿಂದು ಮಿಕ್ಕ ಒಂದಾಣೆ ಅಗಸನಿಗೆಕೊಟ್ಟು ಅವನಿಂದ ಇಸ್ತ್ರಿ ಮಾಡಿದ ಬಟ್ಟೆಗಳನ್ನು ಬಾಡಿಗೆಗೆ ತೆಗೆದು ಹಾಕಿಕೊಂಡು, ಸಾಯಂಕಾಲ ಠೀವಿಯಿಂದ ರಸ್ತೆಗಳಲ್ಲಿ ತಿರುಗಾಡುತ್ತಿದ್ದ. 'ಯಾರಯ್ಯಾ ಬರ್ತಾಯಿರೋದು?' ಎಂದರೆ 'ಅಷ್ಟು ಗೊತ್ತಿಲ್ಲವೇ? ಹೈದರಾಬಾದ್ ನವಾಬರ ಅಳಿಯಂದಿರಾದ ಚಿಕ್ಕಲಕ್ಕಪ್ಪನವರು' ಎಂದು ಹೇಳಿಕೊಂಡು ಅಕ್ಕಪಕ್ಕದವರು ಪಕಪಕ ನಗುತ್ತಿದ್ದರು.

ಒಂದು ಸಾರಿ ಜಡಿಮಳೆ ಹಿಡಿದು ಸೌದೆಗಾಗಿ ಹೊರಗೆ ಹೋಗಲು ಸಾಧ್ಯವಾಗಲಿಲ್ಲ. ಚಿಕ್ಕಲಕ್ಕಪ್ಪನ ಹತ್ತಿರ ಉಳಿತಾಯದ ಕಾಸು ಇಲ್ಲದಿದ್ದುದರಿಂದ ಆತನಿಗೆ ಏನು ಮಾಡಲೂ ತೋರಲಿಲ್ಲ. ಒಂದು ಅರಳಿಮರದ ಕೆಳಗೆ ಮಳೆಯಲ್ಲಿ ನೆನೆಯುತ್ತಾನಿಂತಿದ್ದ. ಹಿಂದಿನ ರಾತ್ರಿ ಮಳೆಗೆ ಆ ಮರದ ಬುಡದಲ್ಲಿದ್ದ ಮಣ್ಣು ತುಂಬಾ ಕೊಚ್ಚಿಕೊಂಡುಹೋಗಿತ್ತು ಅವನು ಏನೋ ಯೋಚಿಸುತ್ತಾ ಕಾಲಿನ ಹೆಬ್ಬೆರಳಿನಿಂದ ಅಲ್ಲಿದ್ದ ಮಣ್ಣನ್ನು ಕೆದಕಲು, ಆಗಏನೋ ಬೆರಳಿಗೆ ತಗುಲಿದಂತೆ ಆಯಿತು. 'ಏನಪ್ಪಾ ಇದು?' ಎಂದು ಹಾಗೇ ಕುಳಿತು

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.



ಬಟ್ಟೆಗಾಗಿಯೇ ಇಷ್ಟೊಂದು ಹಣ ಕಳುಹಿಸಿದ ಆ ಚಿಕ್ಕಲಕ್ಕಪ್ಪನು ಯಾರೋ ಕೋಟ್ಯಾಧೀಶ್ವರ ನಾಗಿರಬೇಕು." ಎಂದು ಅಂದುಕೊಂಡಳು. ಕಾಣಿಕೆ ಕಳುಹಿಸಿದವರಿಗೆ ಮರು ಕಾಣಿಕೆ ಕಳುಹಿಸುವುದು ಮರ್ಯಾದೆ. ಆದುದರಿಂದ ಆಕೆ ನವಾಬರ ನೆಯ್ಗೆವರನ್ನು ಬರಮಾಡಿ ಕೊಂಡು, ತೆಳುವಾದ ರೇಷ್ಮೆ ಬಟ್ಟೆಗಳನ್ನು ನೇಯ್ದುಕೊಂಡು ಬರುವಂತೆ ಹೇಳಿದಳು. ಅವರು ನೇಯ್ದುಕೊಂಡು ಬಂದ ಆ ತೆಳು ವಾದ ವಸ್ತ್ರಗಳೆಲ್ಲಾ ಒಂದು ಸಣ್ಣ ಕರಂಡಕ ದಲ್ಲಿ ಹಿಡಿಸಿತು. ಆಕೆ ಅದನ್ನು ಮೆಚ್ಚಿಕೊಂಡು ಆ ಕರಂಡಕವನ್ನು ಚಿಕ್ಕಲಕ್ಕಪ್ಪನಿಗೆ ಕಾಣಿಕೆ ಯಾಗಿ ಕಳುಹಿಸಿದಳು.

ಕೈಯಿಂದ ಸುತ್ತಲೂ ಇದ್ದ ಮಣ್ಣನ್ನು ತೆಗೆದರೆ ಒಂದು ಕೊಡ ಕಾಣಿಸಿತು. ಆ ಕೊಡದ ತುಂಬಾ ವರಹಗಳಿತ್ತು. ಅವನು ಅದನ್ನು ನೋಡಿ ಆನಂದದಿಂದ ಕುಣಿದುಕುಪ್ಪಳಿಸಿ ನೆಟ್ಟಗೆ ಅಗಸರವನ ಮನೆಗೆ ಓಡಿಹೋಗಿ, ಅವನಿಗೆರಡು ವರಹಗಳನ್ನುಕೊಟ್ಟು "ಲೇ, ಮಡಿವಾಳ, ಈ ಕೊಡವನ್ನು ಎತ್ತಿಕೊಂಡು ಹೋಗಿ ಹೈದರಾಬಾದಿನ ನವಾಬರ ಮಗ ಳಿಗೆ ಕೊಟ್ಟು 'ಲಚ್ಚಿರೆಡ್ಡಿಪಾಳ್ಯದ ಚಿಕ್ಕ ಲಕ್ಕಪ್ಪನವರು ಕಳುಹಿಸಿದರು' ಎಂದುಹೇಳು. 'ಏಕೆ?' ಎಂದರೆ, 'ಕುಪ್ಪಸದ ಬಟ್ಟೆಗಾಗಿ' ಅಂತಹೇಳಿ ನೆಟ್ಟಗೆ ಹಿಂತಿರುಗಿ ಬಂದುಬಿಡು" ಎಂದ. ಅದೇ ರೀತಿ ಮಾಡಿ ಬಂದ ಅಗಸ.

ಹೈದರಾಬಾದಿನ ನವಾಬರ ಮಗಳು ಆ ವರಹಗಳಕೊಡವನ್ನು ನೋಡಿ "ಕುಪ್ಪಸದ

ಅಂತಹ ಬೆಲೆಬಾಳುವ ಬಟ್ಟೆಯನ್ನು ಧರಿಸಿ ಷೋಕಾಗಿ ಷಿಕಾರು ಹೊರಡುವುದು ಚಿಕ್ಕ ಲಕ್ಕಪ್ಪನಿಗೇನೋ ಇಷ್ಟ. ಆದರೆ ಅವನ ಉದ್ದೇಶವೇ ಬೇರೆಯಿತ್ತು. ಆ ವಸ್ತ್ರಗಳನ್ನು ಮತ್ತೆ ಚೆನ್ನಾಗಿ ಮಡಿಕೆ ಹಾಕಿ, ಕರಂಡಕ ದಲ್ಲಿಟ್ಟು, ಆ ಕರಂಡಕವನ್ನು ಈ ಸಾರಿ ನವಾಬನಿಗೇ ಕಳುಹಿಸಿದ. ಈ ಬಟ್ಟೆಗಳು ತನ್ನ ನೇಯ್ಗೆಯವರು ನೇದದ್ದೆಂದು ನವಾಬ ನಿಗೆ ತಿಳಿಯದು. ಅವುಗಳನ್ನು ನೋಡಿ ನವಾಬ ಸಂತೋಷಪಟ್ಟು, 'ಈ ಚಿಕ್ಕಲಕ್ಕಪ್ಪ ಯಾರೋ ನನಗಿಂತ ದೊಡ್ಡ ಮನುಷ್ಯನಿರ ಬೇಕು. ಇಲ್ಲದಿದ್ದರೆ ಇಂತಹ ಬೆಲೆಬಾಳುವ ವಸ್ತ್ರಗಳನ್ನು ನೇಯಿಸಿ ನನಗೆ ಕಳುಹಿಸಲು ಸಾಧ್ಯವಾಗುತ್ತಿರಲಿಲ್ಲ' ಎಂದುಕೊಂಡ. ಪ್ರತಿಯಾಗಿ ಅನೇಕ ಆನೆಗಳನ್ನೂ ಒಂಟೆ

ಗಳನ್ನೂ ತರಿಸಿ, ಅವುಗಳಮೇಲೆ ವರಹಗಳು ತುಂಬಿದ ಚೀಲಗಳನ್ನು ಕಟ್ಟಿಸಿ, ಚಿಕ್ಕಲಕ್ಕಪ್ಪ ನಿಗೆ ಕಾಣಿಕೆಯಾಗಿ ಕಳುಹಿಸಿಕೊಟ್ಟ.

ಲಚ್ಚಿರೆಡ್ಡಿಪಾಳ್ಯಕ್ಕೆ ಆನೆಗಳೂ ಒಂಟೆ ಗಳೂ ಬಂದು ಹೋದುದನ್ನು ಊರಿನವ ರೆಲ್ಲಾ ನೋಡಿದರೇ ಹೊರತು ಯಾರಿಗೂ ನಡೆದ ವಿಷಯವೇನೂ ತಿಳಿಯದು. ಏಕೆಂದರೆ ಚಿಕ್ಕಲಕ್ಕಪ್ಪ ಬಂದು ಚೀಲಗಳಲ್ಲಿ ಏನಿತ್ತೆಂಬು ದನ್ನು ಅರಿತುಕೊಂಡು, ಅವುಗಳನ್ನು ಹಾಗೆ ಯೇ ನವಾಬನಂದಿನಿಗೆ ಕಾಣಿಕೆಯಾಗಿ ಕಳುಹಿಸಿದ. ನವಾಬನ ಮಗಳು ಆ ಹಣ ನೋಡಿದಕೂಡಲೇ, ಕಣ್ಣುಗಳು ಕೋರೈಸಿ ಆಕೆ ಸಪರಿವಾರ ಸಮೇತ ಹೊರಟು ಲಚ್ಚಿ ರೆಡ್ಡಿಪಾಳ್ಯದ ಊರ ಹೊರಗೆ ಡೇರೆಯಲ್ಲಿ ಠಿಕಾಣಿ ಹಾಕಿದಳು.

ತನ್ನನ್ನು ನೋಡಲು ನವಾಬನಂದಿನಿಯು ಬಂದಳೆಂದು ಚಿಕ್ಕಲಕ್ಕಪ್ಪನಿಗೆ ತಿಳಿಯಿತು. ಗಾಬರಿಯಾಗಿ ಆತ ಸಮೀಪದಲ್ಲಿದ್ದ ಒಂದು ಅಡವಿಗೆ ಓಡಿಹೋದ. ಅಲ್ಲೊಂದು ಸರೋ ವರ. ದೇವಕನ್ಯೆಯರು ಕೆಲವರು ತಮ್ಮ ಕಿರೀಟಗಳನ್ನು ದಡದಮೇಲಿಟ್ಟು ಜಲಕ್ರೀಡೆ ಯಾಡುತ್ತಿದ್ದರು. ಚಿಕ್ಕಲಕ್ಕಪ್ಪ ಆ ಕಿರೀಟ ಗಳನ್ನು ತೆಗೆದುಕೊಂಡು ಮರಹತ್ತಿ ಕುಳಿತು ಕೊಂಡ. ಅವರು 'ನೀನು ಏನು ಕೋರಿ ಕೊಂಡರೆ ಅದನ್ನು ಕೊಡುವೆವು. ನಮ್ಮ ಕೀರಿ ಟಗಳನ್ನು ಕೊಟ್ಟುಬಿಡು. ಅವುಗಳಿಲ್ಲದೆ ನಾವು ನಮ್ಮ ಲೋಕಕ್ಕೆ ಹೋಗುವಂತಿಲ್ಲ. ಕೊಡ ಪ್ಪಾ" ಎಂದು ಕೇಳಿಕೊಂಡರು.



ಆಗ ಅವನು "ನನಗೇನೂ ಬೇಡ. ನಿಮ್ಮ ಬಂಗಾರದ ಕಲಶಗಳಲ್ಲಿ ನೀರು ತುಂಬಿ ಕೊಂಡು ಹೋಗಿ ಊರಾಚೆ ಡೇರಾದಲ್ಲಿರುವ ನವಾಬನಂದಿನಿಗೆ ಕಾಲು ತೊಳೆದುಕೊಳ್ಳಲು ಕೊಡಿ. 'ನೀವು ಯಾರು?' ಎಂದು ಕೇಳಿದರೆ 'ಚಿಕ್ಕಲಕ್ಕಪ್ಪನವರ ಪರಿಚಾರಿಕೆಯರು' ಅಂತ ಹೇಳಿ ಹೊರಟುಹೋಗಿ" ಎಂದ. ಅದಕ್ಕವರು ಒಪ್ಪಿಕೊಳ್ಳಲು, ಅವರ ಕಿರೀಟ ಗಳನ್ನು ಹಿಂದಕ್ಕೆ ಕೊಟ್ಟುಬಿಟ್ಟ. ಅವರು ಚಿಕ್ಕಲಕ್ಕಪ್ಪ ಹೇಳಿದಂತೆ ಚಾಚು ತಪ್ಪದೆ ಮಾಡಿದರು. ನವಾಬ ಕುವರಿ ಆ ದೇವಕನ್ಯೆ ಯರನ್ನೂ ಆ ಬಂಗಾರದ ಕಲಶಗಳನ್ನೂ ನೋಡಿ, ಆಶ್ಚರ್ಯಪಟ್ಟು "ಅಮ್ಮಾ! ಈ ಲಕ್ಕಪ್ಪ ಯಾರೋ ದೇವಗಣಕ್ಕೆ ಸೇರಿದಾತನೇ ಹೊರತು ಸಾಮಾನ್ಯಮಾನವನಲ್ಲ. ಹಾಗಿಲ್ಲ

ದಿದ್ದರೆ ದೇವಕನ್ಯೆಯರೆಂದರೇನು? ಆತನ ಪರಿಚಾರಿಕೆಯರಾಗಿ ಬರುವುದೆಂದರೇನು?" ಎಂಬುದಾಗಿ ಯೋಚಿಸಿದಳು. ಆ ದೇವ ಪುರುಷನ ಸಂದರ್ಶನ ಪಡೆಯುವ ಭಾಗ್ಯ ಎಂದಿಗೋ ಏನೋ ಎಂದು ಆಕೆ ಬೆಳಗಾಗುವ ಮೊದಲೇ ತನ್ನ ಪಟ್ಟಣಕ್ಕೆ ಹೊರಟುಹೋದಳು. ತಮ್ಮ ಊರಿನಲ್ಲಿ ಬಂದಿಳಿದ ನವಾಬನ ಮಗಳನ್ನು ಸಾವಕಾಶವಾಗಿ ಬಂದು ದರ್ಶನ ಪಡೆಯೋಣವೆಂತಿದ್ದ ಲಚ್ಚಿರೆಡ್ಡಿಪಾಳ್ಯದ ಪ್ರಜೆಗಳಿಗೆ ಆಕೆ ರಾತ್ರೋರಾತ್ರಿಯೇ ಹೊರಟು ಹೋದುದನ್ನು ಕಂಡು ತುಂಬಾ ಆಶಾಭಂಗವಾಯಿತು. "ಇದೇನೋ ಚಿಕ್ಕಲಕ್ಕಪ್ಪಾ, ನಾವು ನೋಡುವಮೊದಲೇ ಕಳುಹಿಸಿಬಿಟ್ಟೆ." ಎಂದು ಎಲ್ಲರೂ ಅವನನ್ನು ಪೀಡಿಸಿದರು. ಆಗ ಅವನು "ನಿಮಗೆ ಆಕೆಯನ್ನು ನೋಡಲು ಅಷ್ಟೊಂದು ಕುತೂಹಲವಿದ್ದರೆ, ಬನ್ನಿ ತೋರಿಸುತ್ತೇನೆ. ನನ್ನನ್ನು ಒಂದು ಮುತ್ತಿನ ಪಲ್ಲಕ್ಕಿಯಲ್ಲಿ ಕೂರಿಸಿ, ನೀವೆಲ್ಲರೂ ಹೊತ್ತುಕೊಂಡು ನಡೆಯಬೇಕು" ಎಂದ. "ಇಸ್, ಇಷ್ಟೇತಾನೆ" ಎಂದು ಅವರು ನವಾಬನ ಮಗಳನ್ನು ನೋಡುವ ಆತುರದಿಂದ ಒಪ್ಪಿಕೊಂಡು "ಲಚ್ಚಿರೆಡ್ಡಿಪಾಳ್ಯದ ಚಿಕ್ಕಲಕ್ಕಪ್ಪ ಮಹಾರಾಜರು ದಯಮಾಡಿಸ್ತವರೆ, ಪಕ್ಕಕ್ಕೆ ಸರಿಯಿರೋ ಸರಿಯಿರಿ" ಎಂದು ತಮಟೆ ಬಾರಿಸುತ್ತಾ, ಸೊಗುಸಾಗಿ ಪೋಷಾಕು ಧರಿಸಿದ್ದ ಚಿಕ್ಕಲಕ್ಕಪ್ಪನನ್ನು ಮುತ್ತಿನ ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಹೊರಟರು. ಆ ಡಂಗೂರ ಕೇಳಿದ ಕೂಡಲೇ ಅಂತಃಪುರದಲ್ಲಿದ್ದ ನವಾಬನ ಮಗಳು ಉಪ್ಪರಿಗೆಯಮೇಲಿಂದ ಇಣಿಕಿ ನೋಡಿ, ಮನಸ್ಸು ತಡೆಯಲಾರದೆ ಸರಸರನೆ ಕೆಳಗಿಳಿದು ಬಂದು, ಚಿಕ್ಕಲಕ್ಕಪ್ಪನಕೊರಳಿಗ್ಗೆ ಹೂ ಮಾಲೆ ಹಾಕಿ, ಉಪ್ಪರಿಗೆಯ ಮೇಲಕೆ ಕರೆದುಕೊಂಡು ಹೋದಳು. ಪಲ್ಲಕ್ಕಿ ಕೆಳಗೆ ಇಳಿಸಿ, ಭುಜ ಸವರಿಕೊಳ್ಳುತ್ತಿದ್ದ ಲಚ್ಚಿರೆಡ್ಡಿಪಾಳ್ಯದ ಜನಗಳು ನವಾಬನ ಮಗಳು ಕೆಳಗೆ ಬಂದು, ಚಿಕ್ಕಲಕ್ಕಪ್ಪನನ್ನು ಕರೆದುಕೊಂಡು ಹೋದುದನ್ನು ನೋಡಲೇಇಲ್ಲ. ಅವರುತಮಗೆ ತೋಚಿದಂತೆ ಆಡಿಕೊಳ್ಳುತ್ತಾ ಮೇಲೆನೋಡಿದರು. ಅವರಿಗೆ ಆಗ ಅಂತಃಪುರದಲ್ಲಿ ನವಾಬನ ಮಗಳು ಸಿದ್ಧಮಾಡಿ ಸುತ್ತಿಕೊಡುತ್ತಿದ್ದ ತಾಂಬೂಲವನ್ನು ತೆಗೆದುಕೊಳ್ಳುತ್ತಾ ಕಿರುನಗೆ ಬೀರುತ್ತಾ ನಿಂತಿದ್ದ ಚಿಕ್ಕಲಕ್ಕಪ್ಪ ಕಾಣಿಸಿದ.






ಅಕ್ಬರ್ ಚಕ್ರವರ್ತಿಯ ಕಾಲದಲ್ಲಿ ಹಸ್ತಿನಾಪುರದಲ್ಲಿ ತುಳಸಿದಾಸನೆಂಬ ಒಬ್ಬ ರಾಮಭಕ್ತ ಇದ್ದನು. ಆತನು ಪ್ರತಿ ದಿವಸವೂ ಸಮೀಪ ಗ್ರಾಮಕ್ಕೆ ಹೋಗಿ, ಅಲ್ಲಿನ ಜನರಿಗೆ ವಾಲ್ಮೀಕಿ ರಾಮಾಯಣ ಓದಿ ಹೇಳುತ್ತಿದ್ದ. ಆತ ದೊಡ್ಡ ಪಂಡಿತನಷ್ಟೇ ಅಲ್ಲ. ಮಹಾ ಭಕ್ತನೂ ಹೌದು. ಆತನು ಪುರಾಣ ಹೇಳುತ್ತಿದ್ದರೆ, ಗ್ರಾಮಸ್ಥರಿಗೆಲ್ಲಾ ರಾಮಾಯಣ ಕತೆಯೇ ಕಣ್ಣಿಗೆ ಕಟ್ಟಿದಂತಿರುತಿತ್ತು.

ಹಾಗೆ ಕೇಳಲು ಬರುತ್ತಿದ್ದವರಲ್ಲಿ ಮುದುಕ ಬ್ರಹ್ಮಚಾರಿಯೊಬ್ಬನು ಎಲ್ಲರಿಗಿಂತಲೂ ಮೊದಲೇ ಸಭೆಗೆ ಬರುತ್ತಿದ್ದನು. ಆತನುಹರಿದ ತುಂಡು ಅಂಗವಸ್ತ್ರ ಧರಿಸಿಕೊಂಡು ಬಂದು, ತುಂಬಾ ಭಕ್ತಿ ಶ್ರದ್ಧೆಗಳಿಂದ ಕೇಳುತ್ತಿದ್ದ.

ತುಳಸಿದಾಸನು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಶ್ಲೋಕಗಳನ್ನು ಪಠಿಸಿ, ಅರ್ಥ ಹೇಳುತ್ತಿದ್ದರೆ, ಆಡಿಗಡಿಗೆ ಬಾಯಿ ಒಣಗಿ ಹೋಗುತಿತ್ತು. ಆ ಸಮಯಕ್ಕೆ ಸರಿಯಾಗಿ ಆ ವೃದ್ಧ ಬ್ರಾಹ್ಮಣ ಕುಡಿಯಲು ನೀರು ತಂದು ಆತನ ಚೊಂಬಿನಲ್ಲಿ ಸುರಿದು "ಸ್ವಲ್ಪ ನೀರು ತೆಗೆದುಕೊಳ್ಳಿ ಸ್ವಾಮಿ" ಎಂದು ಹೇಳುತ್ತಿದ್ದ. ದಿನಾ ರಾತ್ರಿ ಪುರಾಣ ಮುಗಿದ ಕೂಡಲೇ ತುಳಸಿದಾಸನು ತನ್ನ ರಾಮಾಯಣ ಪುಸ್ತಕವನ್ನೂ, ಚೆಂಬನ್ನೂ ತೆಗೆದುಕೊಂಡು ಹಸ್ತಿನಾಪುರಕ್ಕೆ ಹಿಂತಿರುಗುವಾಗ ಚೆಂಬಿನಲ್ಲಿ ಉಳಿದಿದ್ದ ನೀರನ್ನು ದಾರಿಯಲ್ಲಿ ಒಂದು ಅರಳಿ ಮರದ ಬುಡಕ್ಕೆ ಸುರಿದುಹೋಗುವುದು ವಾಡಿಕೆ. ಹೀಗೇ ಬಹಳ ದಿನ ಕಳೆಯಿತು.

ಒಂದು ರಾತ್ರಿ ಆತನು ವಾಡಿಕೆಯಂತೆ ಆ ಮರದ ಬುಡಕ್ಕೆ ನೀರು ಸುರಿದು ತನ್ನ ಹಾದಿ ಹಿಡಿದು ಹೋಗುತ್ತಿದ್ದರೆ "ಅಯ್ಯಾ ಸ್ವಲ್ಪ ನಿಲ್ಲು" ಎಂದು ಯಾರೋ ಕೂಗಿದಂತೆ ಕೇಳಿಸಿತು.

'ಮನುಷ್ಯ ಸಂಚಾರವಿಲ್ಲದ ಈ ಪ್ರದೇಶದಲ್ಲಿ ಯಾರು ಕೂಗುವರು?' ಎಂದು ಆಶ್ಚರ್ಯಗೊಂಡು, ತುಳಿಸಿದಾಸ ನಿಂತುಬಿಡಲು, ಬ್ರಹ್ಮರಾಕ್ಷಸನೊಬ್ಬನು ಮರದಿಂದ ಕೆಳಗಿಳಿದುಬಂದು ಆತನಿಗೆ ಪ್ರತ್ಯಕ್ಷವಾದನು. ಅವನನ್ನು ಕಂಡು ತುಳಸಿದಾಸ ಭಯಪಡಲು "ನನ್ನನ್ನು ನೋಡಿ ನೀನೇನು ಭಯಪಡ

ತೆಲುಗು ಕಥೆಯಿಂದ.



ಬೇಕೆನ್ನಿಸಿ, ವರವನ್ನು ಕೊಡುತ್ತಿದ್ದೇನೆ.'' ಎಂದ ಬ್ರಹ್ಮರಾಕ್ಷಸ.

ಅದಕ್ಕೆ ತುಳಸಿದಾಸ “ಮಹಾತ್ಮನೇ. ನನಗೆ ಯಾವ ಕೋರಿಕೆಯೂ ಇಲ್ಲ. ನಾನು ರಾಮ ಭಕ್ತ. ಚಿರಕಾಲವೂ ರಾಮಾಯಣ ಹೇಳುತ್ತಾ, ರಾಮನಾಮ ಜಪಿಸುತ್ತಾ ಜೀವನ ಸಾಗಿಸಬೇಕೆಂದಿದ್ದೇನೆ. ಆದರೂ ಇನ್ನೂ ಆ ಶ್ರೀರಾಮನ ದರ್ಶನ ಲಭಿಸಲಿಲ್ಲ. ಆತನ ದರ್ಶನ ಲಭಿಸುವಂತೆ ಅನುಗ್ರಹಿಸಿದರೆ ಸಾಕು. ಅದಕ್ಕಿಂತಲೂ ನನಗೆ ಬೇರೇನೂ ಬೇಕಾಗಿಲ್ಲ.'' ಎಂದು ಮನಸ್ಸಿನಲ್ಲಿದ್ದ ಅಭಿಲಾಷೆ ಬಯಲು ಮಾಡಿದ.

ಬ್ರಹ್ಮರಾಕ್ಷಸನ ಬಾಯಿಂದ ಸ್ವಲ್ಪ ಹೊತ್ತು ಮಾತೇ ಹೊರಡಲಿಲ್ಲ. “ಅಪ್ಪಾ, ನಿನ್ನಂತಹ ಭಕ್ತನು ಬಯಸಬೇಕಾದ ವರವೇ ಅದು. ಆದರೆ ಅದನ್ನು ಕೈಗೂಡಿಸುವ ಶಕ್ತಿ ನನಗಿಲ್ಲ. ಆ ಮಾತ್ರಕ್ಕೆ ನಿರುತ್ಸಾಹ ಪಡಬೇಡ. ನಾನು ನಿನಗೆ ಶ್ರೀರಾಮ ದೇವರ ದರ್ಶನ ಮಾಡಿಸಲಾರೆನಾದರೂ ಮಾಡಿಸಬಲ್ಲ ಮಹಾನುಭಾವನನ್ನು ತೋರಿಸುವೆನು. ಆತನನ್ನು ನೀನು ದಿನಾಲು ನೋಡುತ್ತಲೇ ಇರುವೆ'' ಎಂದ. “ಯಾರೂ ಸ್ವಾಮಿ ಆತ'' ಎಂದು ಆತುರದಿಂದ ಕೇಳಿದ ತುಳಸಿದಾಸ.

“ನೀನು ಪುರಾಣ ಪಠಿಸುತ್ತಿರುವಾಗ ಪ್ರತಿ ದಿನವೂ ಭಕ್ತಿಶ್ರದ್ಧೆಯಿಂದ ಬಂದು ಕೇಳುತ್ತಾ ನಡುನಡುವೆ ನಿನಗೆ ನೀರು ತಂದುಕೊಡುವ ಆ ವೃದ್ಧ ಬ್ರಹ್ಮಚಾರಿ ಯಾರೆಂದು ನಿನ್ನ ಊಹೆ? ರಾಮ ಭಕ್ತಾಗ್ರೇಸರನಾದ ಹನು

ಬೇಡ. ನಾನೂ ಸಹ ನಿನ್ನಂತೆಯೇ ಒಬ್ಬ ಪಂಡಿತನು. ಆದರೆ ಕೆಟ್ಟದಾರಿಯಲ್ಲಿ ನಡೆದು, ಸಾಧು ಜನರನ್ನು ಹಿಂಸೆಗೊಳಿಸಿದುದರಿಂದ ಈ ಭೀಕರ ರೂಪ ನನಗೆ ಬಂತು. ಸರಿ, ನನ್ನ ಕತೆ ಒತ್ತೊಟ್ಟಿಗಿರಲಿ. ನಿನಗೇನು ವರ ಬೇಕೋ ಕೇಳಿಕೋ” ಎಂದ ಆ ಬ್ರಹ್ಮರಾಕ್ಷಸ.

ತುಳಸಿದಾಸನು ಆಶ್ಚರ್ಯಗೊಂಡು “ಅಯ್ಯೋ, ಎಂತಹ ಮಾತು ಆಡಿದೆ. ನನಗೆ ಯಾವ ವರವೂ ಬೇಡ. ಆದರೆ ನನ್ನ ಮೇಲೆ ನಿನಗೆ ದಯೆಯುಂಟಾಗಲು ಕಾರಣವೇನೋ ತಿಳಿಸು, ಸಂತೋಷಪಡುತ್ತೇನೆ'' ಎಂದ.

“ದಯೆ ಸುಮ್ಮನೆ ಬರಲಿಲ್ಲ. ಬಾಯಾರಿಕೆಯಿಂದ ನಾಲಗೆ ಒಣಗುತ್ತಿರುವಾಗ ದಿನಾಲು ನೀನು ಇಷ್ಟು ನೀರು ಸುರಿದುಹೋಗುತ್ತಿದ್ದುವೆ. ಈ ಉಪಕಾರಕ್ಕೆ ಪ್ರತ್ಯುಪಕಾರ ಮಾಡ



ಮುಂತನೇ ಆತ" ಎಂದು ಹೇಳಿದ ಬ್ರಹ್ಮ ರಾಕ್ಷಸ.

ಈ ಮಾತು ಕೇಳಿದಕೂಡಲೇ ತುಳಸಿದಾಸ ಅಪರಿಮಿತ ಆನಂದ ಹೊಂದಿ, ಆ ಬ್ರಹ್ಮ ರಾಕ್ಷಸನ ಪಾದಗಳನ್ನು ಮುಟ್ಟಿ ಸಾಷ್ಟಾಂಗ ನಮಸ್ಕಾರ ಮಾಡಿದ. ಕೂಡಲೇ ಆ ಬ್ರಹ್ಮ ರಾಕ್ಷಸನಿಗೆ ಭೀಕರ ರೂಪವು ತೊಲಗಿ, ದಿವ್ಯತೇಜಸ್ಸಿನಿಂದ ಪ್ರಕಾಶಿಸುವ ಒಬ್ಬ ಗಂಧರ್ವಪುರುಷನಾದ.

"ಮಹಾತ್ಮಾ, ನಿನ್ನ ಸ್ಪರ್ಶದಿಂದ ನನ್ನ ಹಿಂದಿನರೂಪ ನನಗೆ ಬಂತು. ನಾನೇ ಅದೃಷ್ಟವಂತ. ನಿಮ್ಮ ಉಪಕಾರ ಎಂದಿಗೂ ಮರೆಯಲಾರೆ. ಕೆಲಕಾಲದಲ್ಲೇ ನಿನಗೆ ಶ್ರೀರಾಮನ ಕಟಾಕ್ಷವು ಲಭಿಸುವುದು. ನನಗೆ ಅಪ್ಪಣೆ ಕೊಡಬೇಕು" ಎಂದು ಪರಿಪರಿ ವಿಧದಲ್ಲಿ ತುಳಸಿದಾಸನನ್ನು ಕೊಂಡಾಡಿ, ಅದೃಶ್ಯನಾದನು.

ಮಾರನೇಯ ದಿನ ತುಳಸಿದಾಸನು ಪುರಾಣ ಹೇಳುತ್ತಿದ್ದರೂ ಆತನ ಗಮನವೆಲ್ಲಾ ಪದ್ಧತಿಯಂತೆ ಕುಳಿತುಕೊಂಡು ಕೇಳುವ ಆ ವೃದ್ಧನಕಡೆಗಿತ್ತು. ಬೇಗ ಹರಿಕಥೆ ಮುಗಿಸಿದ ಆ ರಾತ್ರಿ. ಎಲ್ಲರೂ ಹೊರಟುಹೋದರು. ಮುದುಕ ಬ್ರಹ್ಮಚಾರಿಯೂ ಸಹ ಆ ಸ್ಥಳ ಬಿಡುವ ಮೊದಲು "ಏನು ದಾಸರೇ, ರಾಜಕಾರ್ಯವೇನಾದರೂ ಇತ್ತೇ? ಇಷ್ಟು ಬೇಗ ಮುಗಿಸಿಬಿಟ್ಟಿರಿ?" ಎಂದು ಕೇಳಿದ.

ಆಗ ತುಳಸಿದಾಸನು ಆತನ ಪಾದಗಳ ಮೇಲೆ ಬಿದ್ದು "ಅಣ್ಣಾ, ರಾಜಕಾರ್ಯವೇ ಇತ್ತು. ನಿನಗೂ ನನಗೂ ಪ್ರಭುವಾದ ಶ್ರೀರಾಮನ ದರ್ಶನವನ್ನು ನನಗೆ ಮಾಡಿಸಿಕೊಡಬೇಕು. ನಿನ್ನ ನಿತ್ಯ ದರ್ಶನದಿಂದ ನನಗೆ ಕೃಪೆತೋರಿದೆ. ನೀನು ಏನು ಹೇಳಿದರೆ ಅದು ನಡೆಸಿಕೊಡುತ್ತಾನೆ ಶ್ರೀರಾಮ. ಆತನನ್ನು ನನಗೆ ತೋರಿಸು" ಎಂದು ಬಹುವಿಧಗಳಲ್ಲಿ ಪ್ರಾರ್ಥಿಸಿದ.

ಆಂಜನೇಯನು ಕಿರು ನಗೆ ಬೀರುತ್ತಾ 'ಹೀಗೆ ವೇಷ ಧರಿಸಿದರೂ ಈತನಿಗೆ ನನ್ನ ವಿಷಯ ತಿಳಿದು ಹೋಯಿತಲ್ಲಾ' ಎಂದುಕೊಂಡು, "ಸರಿ, ನೀನು ಹೋಗು. ಸ್ವಾಮಿ ದರ್ಶನವಾಗುತ್ತದೆ" ಎಂದು ಹೇಳಿ ಅಂತರ್ಧಾನವಾದನು.

ಆ ರಾತ್ರಿ ತುಳಸಿದಾಸನು ಮನೆಗೆ ಹೋಗಿ ಶ್ರೀರಾಮಚಂದ್ರನನ್ನು ಧ್ಯಾನ ಮಾಡುತ್ತಾ



ಕುಳಿತಿರುವಾಗ ಜೊಂಪು ಹಿಡಿಯಿತು. ಆ ನಿದ್ದೆಯಲ್ಲಿ ಒಂದು ಕನಸು. ಆತನಿಗೆ ಶ್ರೀರಾಮಚಂದ್ರನು ಸೀತಾ ಲಕ್ಷ್ಮಣ ಭರತ ಶತೃಘ್ನರೊಂದಿಗೆ ಪ್ರತ್ಯಕ್ಷವಾದನು. ತುಳಸಿದಾಸನ ಆನಂದಕ್ಕೆ ಮೇರೆ ಇಲ್ಲದಾಯಿತು.

ಬಹಳ ಹೊತ್ತು ನಿಂತಿದ್ದ ಶ್ರೀರಾಮನು ತುಳಸಿದಾಸನನ್ನು ಕುರಿತು "ಭಕ್ತಾ, ನಾನಿನ್ನು ಹೊರಡಲೇನಪ್ಪಾ" ಎಂದು ಪ್ರಶ್ನೆ ಮಾಡಿದ.

ಈ ಪ್ರಶ್ನೆಗೆ ಸೀತಾದೇವಿ "ಆರ್ಯನೇ, ಈತನೊಂದಿಗೆ ನಾವು ಹೇಳಬೇಕೆಂದಿದ್ದ ಮಾತನ್ನು ಮರೆತಂತಿದೆಯಲ್ಲಾ" ಎಂದು ಜ್ಞಾಪಕ ಮಾಡಿದಳು.

"ಏನಪ್ಪಣೆ ತಾಯಿ" ಎಂದು ಆತುರದಿಂದ ಕೇಳಿದ ತುಳಸಿದಾಸ.

ಅದಕ್ಕೆ ಸೀತಾದೇವಿ "ತುಳಸಿದಾಸ್" ವಾಲ್ಮೀಕಿಬರೆದ ರಾಮಾಯಣ ಸಂಸ್ಕೃತದಲ್ಲಿದೆ. ಆ ಭಾಷೆ ಈಗ ಎಲ್ಲರಿಗೂ ಅರ್ಥವಾಗುತ್ತಿಲ್ಲ. ಆದುದರಿಂದ ನೀನು ರಾಮಾಯಣವನ್ನು ಹಿಂದೀ ಭಾಷೆಯಲ್ಲಿ ಬರೆದರೆ ಚೆನ್ನಾಗಿರುತ್ತದೆಂದು ನಮ್ಮ ಅಭಿಪ್ರಾಯ" ಎಂದು ಹೇಳುವುದೂ, ಆದಂಪತಿಗಳು ಅದೃಶ್ಯವಾಗವುದೂ ತುಳಸಿದಾಸನಿಗೆ ಎಚ್ಚರಿಕೆ ಆಗುವುದೂ ಒಂದೇಸಾರಿ ಸಂಭವಿಸಿತು.

ಸೀತಾರಾಮರ ಆಜ್ಞೆಯನ್ನು ಶಿರಸಾವಹಿಸಿ, ತುಳಸಿದಾಸನು ಕೂಡಲೇ ತಾಳೆಗರಿ, ಘಂಟಾಗಳನ್ನು ತಂದು, ರಾಮಾಯಣವನ್ನು ಹಿಂದೀ ಭಾಷೆಯಲ್ಲಿ ಬರೆಯಲು ಆರಂಭಿಸಿದ.

ರಾಮಾಯಣದಂತಹ ಉದ್ಗ್ರಂಥವನ್ನು ದೀಕ್ಷೆಯಾಗಿ ಬರೆಯಲು ಪ್ರಶಾಂತತೆ ಅವಶ್ಯಕವೆಂದು ಎಣಿಸಿ, ಆ ಊರುಬಿಟ್ಟು ತುಳಸಿದಾಸ ಕಾಶಿಯಲ್ಲಿ ಮನೆ ಮಾಡಿದ. ಕಾಶಿಯಲ್ಲಿ ದೊಡ್ಡದೊಡ್ಡ ಪಂಡಿತರೆಷ್ಟೋ ಮಂದಿ ಇರುವರು. ಅವರೊಂದಿಗೆ ಸ್ನೇಹ ಬೆಳಸಿ, ತಾನು ಬರೆದುದನ್ನು ಆಯಾದಿನವೇ ಅವರಿಗೆ ತೋರಿಸುತ್ತಿದ್ದ, ಕೆಲವರು "ಎಲ್ಲರಿಗೂ ಅರ್ಥವಾಗುವ ಭಾಷೆಯಲ್ಲಿ ಬರೆದು ಲೋಕೋಪಕಾರ ಮಾಡುತ್ತಿರುವೆ. ತುಳಸಿದಾಸ್, ನೀನು ಧನ್ಯ, ಧನ್ಯ!" ಎಂದು ಮೆಚ್ಚಿಕೊಳ್ಳುತ್ತಿದ್ದರು. ಮತ್ತೆ ಕೆಲವರು 'ರಾಮಾಯಣ ಸಂಸ್ಕೃತದಲ್ಲೇ ಇರಬೇಕೇ ಹೊರತು ಬೇರೊಂದು ಭಾಷೆಯಲ್ಲಿ ಬರೆದರೆ ಅದು

ಅಪವಿತ್ರವಾಗುತ್ತದೆ" ಎಂದು ದೂರುತ್ತಿದ್ದರು. ಏನಾದರೇನು? ತುಳಸಿದಾಸನ ಕೀರ್ತಿ ಹತ್ತು ದಿಕ್ಕುಗಳಿಗೂ ಹರಡಿತು.

ಒಂದು ದಿನ ತುಳಸಿದಾಸನ ಆಶ್ರಮಕ್ಕೆ ಒಬ್ಬ ಸ್ತ್ರೀ ಬಂದು ಆತನಿಗೆ ನಮಸ್ಕಾರ ಮಾಡಿದಳು. ಆತನು ತನ್ನ ಬರವಣಿಗೆಯಲ್ಲಿ ಮಗ್ನನಾಗಿದ್ದುದರಿಂದ 'ಧೀರ್ಘಸುಮಂಗಳೀ ಭವ! ಪುತ್ರಪೌತ್ರಾಭಿವೃದ್ಧಿರಸ್ತು" ಎಂದು ಆಕೆಯನ್ನು ಆಶೀರ್ವದಿಸಿ, ಮತ್ತೆ ತನ್ನ ಪಾಡಿಗೆ ತಾನು ಬರವಣಿಗೆಯಲ್ಲಿ ಲೀನನಾದ.

ಆಕೆ ಆನಂದಪಡವ ಬದಲು ಬಿಕ್ಕಿಬಿಕ್ಕಿ ಅಳುವುದಕ್ಕೆ ಮೊದಲು ಮಾಡಿದಳು. ಆಗ ಆತನು ಬಗ್ಗಿಸಿದ್ದ ತಲೆಯನ್ನು ಮೇಲೆತ್ತಿ "ಏನು ತಾಯಿ, ಏಕೆ ದುಃಖಿಸುತ್ತಿರುವೆ?" ಎಂದು ಕೇಳಿದ.

ಅದಕ್ಕೆ ಆಕೆ "ಸ್ವಾಮಿ, ನನ್ನ ಪತಿ ಈ ಪ್ರಾತಃಕಾಲವೇ ತೀರಿಹೋದರು. ಶವವನ್ನು ಗಂಗಾನದಿಯ ದಡಕ್ಕೆ ತೆಗೆದುಕೊಂಡು ಹೋದರು. ನಾನು ಅವರೊಂದಿಗೆ ಸಹಗಮನ ಮಾಡಲು ಹೋಗುತ್ತಾ, ಮಹಾತ್ಮರಾದ ನಿಮಗೆ ನಮಸ್ಕಾರಮಾಡಿ ಹೋಗೋಣವೆಂದು ಬಂದೆ" ಎಂದಳು,

ಆತನು ನಿರ್ಘಾಂತನಾದನು. "ತಾಯಿ, ಶ್ರೀರಾಮಚಂದ್ರನೇ ನನ್ನ ಬಾಯಿಂದ ಆರೀತಿ ಆಡಿಸಿದ. ಆದ್ದರಿಂದ ನೀನು ಅದೃಷ್ಟವಂತೆ ಎಂದಾಯಿತು. ರಾಮನು ಎಂದೂ ಆಡಿತಪ್ಪಿದವನಲ್ಲ. ನನ್ನ ಬಾಯಿಂದ ನುಡಿಸಿದ ಈ ಮಾತುಗಳೂ ಸಹ ಸುಳ್ಳಾಗುವಂತಿಲ್ಲ. ನೀನು




ಗಂಗಾನದಿಯ ದಡಕ್ಕೆ ಹೋಗಿ ಶವವನ್ನು ಇಲ್ಲಿಗೆ ತೆಗೆದುಕೊಂಡು ಬಾ, ನೋಡುವಾ" ಎಂದ.

ಆಕೆ ಬೇಗ ಓಡಿ ಹೋಗಿ ಪತಿಯ ಶವದೊಂದಿಗೆ ಹಿಂತಿರುಗಿ ಬಂದಳು.

ತುಳಸಿದಾಸನು ಶ್ರೀರಾಮಚಂದ್ರನನ್ನು ಧ್ಯಾನಿಸಿ "ಕಲ್ಲನ್ನು ಲಾವಣ್ಯವತಿಯಾಗಿ ಬದಲಾಯಿಸಿದ ಮಹಾನುಭಾವ ನೀನು. ನಿನಗೆ ಅಸಾಧ್ಯವೆನ್ನುವುದು ಏನಿದೆ? ಈತನಿಗೆ ಮತ್ತೆ ಪ್ರಾಣಕೊಟ್ಟು, ನನ್ನ ಮಾತನ್ನು ಉಳಿಸು, ತಂದೆಯೇ" ಎಂದು ಪ್ರಾರ್ಥಿಸಿದ.

ಆತನು ಹಾಗೆ ಪ್ರಾರ್ಥಿಸುತ್ತಿರುವಾಗಲೇ ಆ ಶವವು ಆಗತಾನೇ ನಿದ್ದೆಯಿಂದ ಎಚ್ಚರಗೊಂಡಂತೆ ಎದ್ದು ಕುಳಿತುಕೊಳ್ಳಲು, ಆ ಸ್ತ್ರೀ ತಡೆಯಲಾರದ ಆನಂದದಿಂದ ಬಗೆಬಗೆ



ಯಾಗಿ ತುಳಸಿದಾಸನಿಗೆ ಕೃತಜ್ಞತೆಯನ್ನು ಸೂಚಿಸಿ, ಹೊರಟುಹೋದಳು.

ಈ ವಿಷಯ ಅಕ್ಬರ್ ಚಕ್ರವರ್ತಿಗೂ ತಿಳಿಯಿತು. ಆತನು ಒಡ್ಡೋಲಗದಲ್ಲಿ ಅನೇಕಾನೇಕ ಪಂಡಿತರೆದುರಿಗೆ ತುಳಸಿದಾಸನ ಮಾಹಾತ್ಮ್ಯೆಯನ್ನು ಮೆಚ್ಚಿಕೊಳ್ಳುತ್ತಿದ್ದ.

ತುಳಸಿದಾಸನೆಂದರೆ ಸಹಿಸದ ಆ ಪಂಡಿತರು "ಆತನಿಗೆ ಮಾಹಾತ್ಮ್ಯೆಯೂ ಇಲ್ಲ, ಮಣ್ಣೂ ಇಲ್ಲ, ಎಲ್ಲಾ ಸುಳ್ಳಿನ ಕಂತೆ. ಅದಷ್ಟೇ ಅಲ್ಲ; ಈಗ ರಾಮಾಯಣವನ್ನು ಹಿಂದೀ ಭಾಷೆಯಲ್ಲಿ ಬರೆದು ಅಪವಿತ್ರ ಮಾಡುತ್ತಿದ್ದಾನೆ. ಇದರಿಂದ ದೇಶಕ್ಕೆ ಯಾವ ಹಾನಿಯುಂಟಾಗುವುದೋ ಏನೋ" ಎಂದು ಅಸೂಯೆ ವ್ಯಕ್ತಪಡಿಸಿದರು.

ಕೂಡಲೇ ಬಾದಷಹನು ತುಳಸಿದಾಸನನ್ನು ಬರಮಾಡಿ "ಏನಯ್ಯಾ, ನೀನು ಕಾಶಿಯಲ್ಲಿ ಏನೋ ಮಾಟಮಾಡುತ್ತಿರುವೆಯಂತೆ. ಸತ್ತುಹೋದವನನ್ನು ಬದುಕಿಸಿದೆಯಂತೆ, ನಿಜವೇ?" ಎಂದು ಗದರಿಸಿ ಕೇಳಿದ.

ತುಳಸಿದಾಸನು "ಪ್ರಭೂ, ನಾನು ಅಲ್ಲ. ಶ್ರೀರಾಮಚಂದ್ರನೇ ಬದುಕಿಸಿದ ಆತನನ್ನು" ಎಂದ.

"ಏನು, ಶ್ರೀರಾಮಚಂದ್ರನೇ! ಎಲ್ಲಿ, ಆತನನ್ನು ನನಗೆ ತೋರಿಸು. ಸುಳ್ಳುಪಳ್ಳು ಆಡಿದೆಯೆಂದರೆ ಶಿಕ್ಷೆಗೆ ಗುರಿ ಮಾಡುತ್ತೇನೆ" ಎಂದು ಬೆದರಿಸಿದ ಬಾದಷಹ.

ತುಳಸಿದಾಸ ಏನೋ ಹೇಳಲು ಅನುವಾಗುತ್ತಿರುವಲ್ಲಿ, ಕೇಳಿಸಿಕೊಳ್ಳದೆ ಬಾದಷಹನು ಭಟರನ್ನು ಕರೆದು "ಆ ರಾಮಚಂದ್ರನು ಯಾರೋ ನನಗೆ ತೋರಿಸುವವರೆವಿಗೂ ಈತನನ್ನು ಎಲ್ಲಿಯೂ ಹೋಗಗೊಡಬೇಡಿ" ಎಂದು ಆಜ್ಞಾಪಿಸಿ, ಹೊರಟುಹೋದ.

ಸ್ವಲ್ಪ ಸಮಯದಮೇಲೆ ವೃದ್ಧ ಬ್ರಹ್ಮಚಾರಿಯ ವೇಷದಲ್ಲಿ ಹನುಮಂತನು ಅಲ್ಲಿಗೆ ಬಂದು, ತನ್ನ ಸಂಗಡ ತಂದ ತಾಳಗರಿ, ಘಂಟಾ, ಆತನ ಕೈಗೆಕೊಟ್ಟು, "ದಾಸ, ನೀನೇನೂ ಚಿಂತೆ ಪಡಬೇಡ. ನೀನು ರಾಮಾಯಣ ಬರೆಯುತ್ತಾ ಕುಳಿತುಕೋ. ಬಾದಷಹನನ್ನು ನಾನು ವಿಚಾರಿಸಿಕೊಳ್ಳುತ್ತೇನೆ" ಎಂದು ಧೈರ್ಯ ಹೇಳಿ ಹೊರಟುಹೋದ.

ಬೆಳಗಾಗುವ ವೇಳೆಗೆ ಬಾದಷಹನ ಪಟ್ಟಣದಲ್ಲಿ ಎಲ್ಲಿ ನೋಡಿದರೂ ಕಪಿಗಳಿಂದ, ಕೋಡಗಗಳಿಂದ ತುಂಬಿಹೋದವು. ಒಂದು ಮನೆಯಮೇಲಾದರೂ ಒಂದು ಹೆಂಚಿಲ್ಲ. ಯಾವ ಮರದಲ್ಲಿ ನೋಡಿದರೂ ಒಂದು ಕಾಯಾಗಲೀ, ಹಣ್ಣಾಗಲೀ ಉಳಿದಿಲ್ಲ. ಪಾದಚಾರಿಗಳ ಮೇಲೆ ಬಿದ್ದು ಅವರನ್ನು ಪರಚುತ್ತಿದ್ದವು ಕೋತಿಗಳು. ಯಾರು ಏನು ಎಲ್ಲಿಟ್ಟುಕೊಂಡರೂ ಉಳಿಸದೆ ಎತ್ತಿಕೊಂಡುಹೋಗುತ್ತಿದ್ದವು.

ನಾಲ್ಕು ಜನ ಸೇರಿದಡೆ ಎಲ್ಲಿಂದಲೋ ಹಠಾತ್ತನೆ ಒಂದು ಕೋಡಗ ಬಂದು ಅವರನ್ನು ಬೆದರಿಸುತಿತ್ತು. ಆ ದಿನ ಬಾದಷಹನ ಅಂತಃಪುರದಲ್ಲೂ ಕಪಿಗಳು ತುಂಬಿದ್ದವು. ನಾಲ್ಕು ಭಾರಿ ವಾನರರು ಬಂದು ಆತನು ಮಲಗಿಕೊಂಡಿದ್ದ ಮಂಚವನ್ನು ಹೊತ್ತುಕೊಂಡು ಹೋಗಿ ಹಿತ್ತಲಲ್ಲಿ ದಢಾರನೆಬೀಳಿಸಿದವು. ಆತನಿಗೆ ಎಚ್ಚರವಾಗಿ ನೋಡಿದರೆ ಕಂಡುದಾದರೂ ಏನು? ಎತ್ತ ನೋಡಿದರೂ ಕಪಿಗಳ ಸಮೂಹ. ಯಾರನ್ನು ನೋಡಿದರೂ ರಕ್ತಮಯವಾಗಿದ್ದರು.

"ಏನಿದೆಲ್ಲಾ" ಎಂದು ವಿಚಾರಣೆ ಮಾಡಲು, ಮಂತ್ರಿ ಅಲ್ಲಿಗೆ ಬಂದು "ಪ್ರಭೂ, ಸಾಧು ಪುರುಷನಾದ ತುಳಸಿದಾಸನನ್ನು ನಿರ್ಬಂಧಿಸಿದ್ದರಿಂದ ಶ್ರೀರಾಮಚಂದ್ರನು ಕುಪಿತನಾಗಿ ಈ ವಾನರಸೇನೆಯನ್ನು ಕಳುಹಿಸಿದನೇನೋ ಎಂದು ನನಗೆ ತೋರುತ್ತಿದೆ" ಎಂದ.



ಅಕ್ಬರ ಬಾದಷಹನು ತಕ್ಷಣ ತುಳಸಿದಾಸನಿದ್ದ ಸ್ಥಳಕ್ಕೆ ಹೋಗಿ "ಮಹಾತ್ಮಾ, ನನ್ನಿಂದ ಅಪರಾಧವಾಯಿತು. ಈ ಕಪಿಗಳನ್ನು ಎಲ್ಲಿಂದ ಬರಮಾಡಿದೆಯೋ ಅಲ್ಲಿಗೇ ಕಳುಹಿಸಿಬಿಡು" ಎಂದು ಪ್ರಾರ್ಥಿಸಿದ.

ತುಳಸಿದಾಸನಿಗೆ ಕಪಿಗಳ ಅವಾಂತರವೇ ತಿಳಿಯದು. ಏಕೆಂದರೆ ಆತನು ತನ್ನ ಬರವಣಿಗೆಯಲ್ಲೇ ಲೀನವಾಗಿದ್ದ. ಅಷ್ಟೇಅಲ್ಲ. ಕಪಿಗಳೂ ಸಹ ಅತ್ತಕಡೆ ಸುಳಿಯಲೇ ಇಲ್ಲ. "ಏನು, ಕಪಿಗಳೇ" ಎಂದು ಆತನು ಹೊರಗೆ ಬಂದು ನೋಡಿದರೆ, ವಾನರ ಸೇನೆಯೆಲ್ಲಾ ಬುದ್ಧಿವಂತರಂತೆ ತಲೆ ತಗ್ಗಿಸಿಕೊಂಡು ಕುಳಿತಿದ್ದವು.

ಆನಂದಭರಿತನಾದ ತುಳಸಿದಾಸನು ಅಕ್ಬರನೊಂದಿಗೆ "ಪ್ರಭೂ, ನೀನೆಂತಹ

ಅನೃಷ್ಟವಂತ. ಶ್ರೀರಾಮಚಂದ್ರನ ದರ್ಶನ ನಿನಗೆ ಲಭಿಸುವುದು. ಆತನ ಬರುವಿಕೆಯನ್ನು ತಿಳಿಯಪಡಿಸಲು ಈ ಕಪಿಗಳು ಬಂದಿವೆ.... ಶ್ರೀರಾಮಚಂದ್ರನಿಗೆ ಇಂತಹ ಸೇನೆಗಳು ಎಪ್ಪತ್ತೆರಡು ಇವೆ. ಅದರಲ್ಲಿ ಈಗ ಒಂದೇ ಬಂದಿದೆ. ಆ ಎಪ್ಪತ್ತೆರಡು ಸೇನೆಗಳೂ ಬಂದ ಮೇಲೆ ಶ್ರೀರಾಮಚಂದ್ರನು ಸೀತಾದೇವಿಯನ್ನೂ, ಲಕ್ಷ್ಮಣಭರತಶತೃಘ್ನರನ್ನೂ, ಹನುಮಂತನನ್ನೂ, ಸುಗ್ರೀವ ವಿಭೀಷಣರನ್ನೂ ಸಂಗಡ ಕರೆದುಕೊಂಡು ಬರುವನು. ಯಾವ ಚಕ್ರವರ್ತಿಗೂ ಲಭಿಸದ ಪುಣ್ಯ ನಿನ್ನ ಭಾಗಕ್ಕೆ ದೊರೆಯಿತು ಬಿಡು" ಎಂದು, ಬಾದಷಹನ ನಿಮಿತ್ತದಿಂದ ತನಗೂ ಸಹ ಆ ದೇವದೇವನ ದರ್ಶನ ಲಭಿಸುವುದೆಂದು ಸಂತೋಷದಿಂದ ಉಬ್ಬಿಹೋದ.

ಅಕ್ಬರನು ಮಾತ್ರ ನಡುಗಿದ "ಒಂದು ಸೇನೆಯಿಂದಲೇ ಇಷ್ಟೊಂದು ಅಲ್ಲಕಲ್ಲೋಲ ನಡೆಯಿತು. ಮಿಕ್ಕ ಎಪ್ಪತ್ತೊಂದು ವಾನರ ಸೇನೆಗಳು ಬಂದರೆ ಗತಿಯೇನು?" ಎಂದು ಆತನಿಗೆ ಭಯವಾಯಿತು.

ಬಾದಷಹನು ತುಳಸಿದಾಸನ ಪಾದಗಳ ಮೇಲೆ ಬಿದ್ದ. "ಮಹಾತ್ಮಾ, ಆ ಸೇನೆಗಳೂ ಬೇಡ. ರಾಮನೂ ಬರಬೇಕಾಗಿಲ್ಲ. ಈ ಕೋತಿಗಳನ್ನು ಹೋಗುವಂತೆ ಹೇಳು. ನಿನಗೆ ಪುಣ್ಯವಿರುತ್ತದೆ" ಎಂದು ಗೋಗರೆದ.

ತುಳಸಿದಾಸನು ಹನುಮಂತನನ್ನು ಸ್ಮರಿಸಿದ. ಕೂಡಲೇ ಕೋತಿಗಳೂ ಕೋಡಗಗಳು ಇದ್ದಕ್ಕಿದ್ದಂತೆಯೇ ಮಾಯವಾದವು.

ಬಾದಷಹನು ಅಂದಿನಿಂದ ಸಾಧುಗಳನ್ನು ತೊಂದರೆ ಪಡಿಸ ಕೂಡದೆಂದು ನಿರ್ಧರಿಸಿಕೊಂಡ. ತುಳಸಿದಾಸನನ್ನು ಅನೇಕ ರೀತಿಯಲ್ಲಿ ಸತ್ಕರಿಸಿ, ಸುರಕ್ಷಿತವಾಗಿ ಕಾಶಿಗೆ ಕಳುಹಿಸಿಬಿಟ್ಟ. ಇನ್ನಷ್ಟು ದಿನಗಳಾದ ಮೇಲೆ ತುಳಸಿದಾಸನು ತನ್ನ ಹಿಂದೀ ರಾಮಾಯಣವನ್ನು ಸಂಪೂರ್ಣವಾಗಿ ಬರೆದು, ಕೆಲಕಾಲವಾದಮೇಲೆ ಜೀವನ ಯಾತ್ರೆ ಮುಗಿಸಿ ಶ್ರೀರಾಮನಲ್ಲಿ ಐಕ್ಯವಾದನು. ಆತನು ದೇಶಕ್ಕೆ ಅರ್ಪಿಸಿದ ಹಿಂದೀ ರಾಮಾಯಣದಿಂದ ತುಳಸಿದಾಸನ ಕೀರ್ತಿ ಶಾಶ್ವತವಾಗಿ ಉಳಿಯಿತು.






ವೈಕುಂಟರಾಯರು ಕಾಶಿಗೆ ಪ್ರಯಾಣ ಮಾಡುತ್ತಿರುವುದು ಇದೇ ಮೊದಲನೆಯ ಬಾರಿ. ರೈಲು ಮದರಾಸು ಸ್ಟೇಷರ್ ಬಿಟ್ಟಾಗ ಲಿಂದ ಆತನಿಗೆ ಒಂದೇ ಯೋಚನೆ. "ಕಾಶಿಯಲ್ಲಿ ಎಲ್ಲಿ ಇಳಿದುಕೊಳ್ಳುವುದು?" ಎಂದು. ಸಹ ಪ್ರಯಾಣಿಕರಲ್ಲಿ ಕಾಶಿಯವರೆವಿಗೆ ಬರುವವರು ಯಾರೂ ಕಾಣ ಬರಲಿಲ್ಲ.

ಮೊಗಲ್‌ಸರಾಯ ಸ್ಟೇಷರ್‌ನಲ್ಲಿ ಒಬ್ಬಾತ ವೈಕುಂಟರಾಯರಿಗೆ ಜೊತೆ ಸಿಕ್ಕಿದ. "ನೀವೇನೂ ಯೋಚಿಸ ಬೇಡಿ. ನಿಮ್ಮ ಮದರಾಸು ಕಡೆಯವನೇ ಒಬ್ಬಾತ ಮನೆ ಮಾಡಿದ್ದಾನೆ. ನಿಮ್ಮನ್ನು ಅಲ್ಲಿ ಬಿಡುತ್ತೇನೆ" ಎಂದ ಆತ.

ಕಾಶಿ ಸ್ಟೇಷರ್ ತಲುಪಿದ ಕೂಡಲೇ ಆ ಸ್ನೇಹಿತ ಒಂದು ಟ್ಯಾಕ್ಸಿ ಮಾತನಾಡಿದ. ಅವರೆಲ್ಲ ಅದರಲ್ಲಿ ಕುಳಿತು ಹೊರಟರು. ಸ್ವಲ್ಪ ಹೊತ್ತಿಗೆಲ್ಲಾ ಒಂದು ದೊಡ್ಡ ಮಹಡಿಮನೆಯ ಮುಂದೆ ಬಂದು ನಿಂತಿತು. ಆ ಸ್ನೇಹಿತ "ಇದೇ ಸ್ವಾಮಿ, ನಾನು ಹೇಳಿದ ಮನೆ. ನೀವು ನೆಟ್ಟಗೆ ಒಳಕ್ಕೆ ಹೋಗಬಹುದು. ನಾನಿನ್ನು ಬರುತ್ತೇನೆ" ಎಂದ.

ವೈಕುಂಟರಾಯರು "ಇದನ್ನು ಟ್ಯಾಕ್ಸಿಯವನಿಗೆಕೊಡಿ" ಎಂದು ಐದು ರೂಪಾಯಿಯ ನೋಟೊಂದನ್ನು ಕೊಡಲುಹೋದರು ಆ ಸ್ನೇಹಿತ ಅದನ್ನು ಇಸುಕೊಳ್ಳದೆಯೇ ಟ್ಯಾಕ್ಸಿ ಹತ್ತಿ ಹೊರಟುಹೋದ.

ಅನಿರೀಕ್ಷಿತವಾಗಿ ಈ ಹೊಸ ಊರಿನಲ್ಲಿ ತನಗೆ ಈರೀತಿ ಸಹಾಯಮಾಡಿದ ಆ ಅಪರಿಚಿತ ಸ್ನೇಹಿತನನ್ನು ಮನಸ್ಸಿನಲ್ಲಿಯೇ ಮೆಚ್ಚಿಕೊಂಡು, ತನ್ನ ಪೆಟ್ಟಿಗೆ, ಮತ್ತು ಹಾಸಿಗೆ ತೆಗೆದುಕೊಂಡು ಮನೆಯೊಳಕ್ಕೆ ಕಾಲಿಟ್ಟಕೂಡಲೇ, ಋಷಿಯಂತಹ ವ್ಯಕ್ತಿಯೊಬ್ಬನು "ದಯಮಾಡಿಸಿ, ದಯಮಾಡಿಸಿ, ರಾಯರೇ' ಎಂದುಎದುರಾಗಿಬಂದು ಒಳಕ್ಕೆ ಕರೆದುಕೊಂಡು ಹೋದ.

ವೈಕುಂಟರಾಯರು ತಮ್ಮ ಸ್ಥಳ, ತಮಗೆ ದಾರಿಯಲ್ಲಿ ಸಿಕ್ಕಿ ಸಹಾಯ ಮಾಡಿದ ಆ ಅಪರಿಚಿತ ಸ್ನೇಹಿತನ ವಿಷಯವೆಲ್ಲಾ ವಿವರವಾಗಿ ತಿಳಿಯಪಡಿಸುತ್ತಾ "ಅಲ್ಲನಿಮ್ಮ ಹೆಸರು ಕೇಳುವುದನ್ನೇ ಮರೆತು ಬಿಟ್ಟೆ" ಎಂದರು.

"ನನ್ನ ನಿಜವಾದ ಹೆಸರು ರಾಮನಾಥಂ. ಆದರೆ ಬಹಳ ಜನ ನನ್ನನ್ನು 'ಲೋಕೋಪಕಾರಿ' ಎಂದು ಕರೆಯುತ್ತಾರೆ. ನಾನೂ ಮದ

ಕುಸುಮಕುಮಾರಿ, ಮದರಾಸು



ದಿಲ್ಲ. ಹೋಗಲಿ ಬಿಡಿ. ಸಾಯಂಕಾಲ ಹಾಗೇ ಊರೊಳಗೆ ಹೋದರೆ ಒಂದು ಬೀಗ ತೆಗೆದುಕೊಂಡರಾಯಿತು. ಅಷ್ಟರವರೆವಿಗೂ ನಿಮ್ಮ ಪೆಟ್ಟಿಗೆಯ ಬೀಗವನ್ನು ಕೋಣೆಗೆ ಹಾಕಿಕೊಳ್ಳಿ" ಎಂದ.

ಅವರು ಊಟ ಮುಗಿಸಿಕೊಂಡು ತುಸ ಹೊತ್ತು ವಿಶ್ರಾಂತಿ ಪಡೆದರು. ಸಾಯಂಕಾಲ ಸ್ವಲ್ಪ ತಂಪಾದ ಮೇಲೆ ಇಬ್ಬರೂ ಒಟ್ಟಾಗಿ ಊರೊಳಗೆ ಹೋದರು. ವೈಕುಂಟರಾಯರು ತಮ್ಮ ಪೆಟ್ಟಿಗೆಯ ಬೀಗ ತೆಗೆದು ಕೋಣೆ ಬಾಗಿಲಿಗೆ ಹಾಕಿ ಕೊಂಡರು. ಆದರೆ ಲೋಕೋಪಕಾರಿ ಮಾತ್ರ ಎಲ್ಲ ಬಾಗಿಲುಗಳನ್ನೂ ಅಗಲವಾಗಿ ತೆಗೆದಿಟ್ಟೇ ಹೊರಟ.

ರಾಷಿನವನೇ ಆದ್ದರಿಂದ ನಮ್ಮ ಜನಗಳೆಂದರೆ ಸ್ವಾಭಿಮಾನದಿಂದ ನನ್ನ ಕೈಲಾದಷ್ಟುಮಟ್ಟಿಗೆ ಸಹಾಯಮಾಡುತ್ತಿರುತ್ತೇನೆ. ಈ ಮಾತ್ರಕ್ಕೆ ಹೆಮ್ಮೆಯಿಂದ ನಮ್ಮವರೆಲ್ಲ ನನ್ನನ್ನು 'ಲೋಕೋಪಕಾರಿ' ಎಂದು ಕರೆಯುವರು" ಎಂದ. ಆ ತರುವಾಯ ಲೋಕೋಪಕಾರಿ ವೈಕುಂಟರಾಯರಿಗೆ ವಿಶಾಲವಾದ ಒಂದು ಕೋಣೆಯನ್ನು ತೋರಿಸಿ "ನಿಮ್ಮ ಸಾಮಾನುಗಳನ್ನು ಈ ಕೋಣೆಯಲ್ಲಿಟ್ಟುಕೊಳ್ಳಿ" ಎಂದ.

ವೈಕುಂಟರಾಯರು "ಮತ್ತೆ ಬೀಗ?" ಎಂದು ಹೇಳುತ್ತಿರುವಲ್ಲಿ ಲೋಕೋಪಕಾರಿ ಪಕಪಕನೆ ನಗುತ್ತಾ "ಕ್ಷಮಿಸಿ. ಬೀಗದ ಅಗತ್ಯವೇ ನನಗಿಲ್ಲ. ಬೀದಿ ಬಾಗಿಲಿಂದ ಎಲ್ಲ ಬಾಗಿಲುಗಳನ್ನು ತೆಗೆದೇ ಇಟ್ಟಿರುತ್ತೇನೆ. ಆದರೂ ಒಂದು ಪೊರಕೆಕಡ್ಡಿ ಸಹ ಹೋಗುವು

ಅವರಿಬ್ಬರೂ ಊರೊಳಗೆ ಸುತ್ತಾಡಿಕೊಂಡು, ಕೊನೆಯಲ್ಲಿ ಒಂದು ಬೀಗದ ಅಂಗಡಿಗೆ ಹೋದರು. ಒಳ್ಳೇಗಟ್ಟಿಯಾಗಿರುವ ಬೀಗ ಒಂದನ್ನು ನೋಡಿ ಕೊಂಡುಕೊಂಡರು ವೈಕುಂಟರಾಯರು. ಕತ್ತಲಾಗುವ ಸಮಯಕ್ಕೆಲ್ಲಾ ಮತ್ತೆ ಮನೆ ಸೇರಿದರು. ಎಲ್ಲಿಟ್ಟ ವಸ್ತುಗಳು ಅಲ್ಲಲ್ಲೇ ಇದ್ದುದನ್ನು ನೋಡಿ ಲೋಕೋಪಕಾರಿ ಹೇಳಿದ್ದು ಸತ್ಯವೆಂದು ತೋರಿತು ವೈಕುಂಟರಾಯರಿಗೆ. ಅತಿಥಿಗೆ ಎಲ್ಲ ಸೌಕರ್ಯಗಳನ್ನೂ ಒದಗಿಸುತ್ತಿದ್ದ ಲೋಕೋಪಕಾರಿ. ಅದಷ್ಟೇ ಅಲ್ಲ, ವೈಕುಂಟರಾಯರ ಹಣ ಒಂದು ಬಿಡಿಕಾಸಾದರೂ ಖರ್ಚಾಗದೆ ಎಲ್ಲ ವೆಚ್ಚಗಳನ್ನೂ ತಾನೇ ವಹಿಸಿಕೊಳ್ಳುತ್ತಿದ್ದ. ಇದಕ್ಕೆ ವೈಕುಂಟರಾಯರು ತುಂಬಾ ಸಂತೋಷಗೊಂಡರು.

ಇನ್ನು ನಾಳೆ ಮನೆಗೆ ಹಿಂದಿರುಗ ಬೇಕೆಂದಿದ್ದಾಗ ವೈಕುಂಟರಾಯರು "ಸ್ವಾಮಿ, ತಮ್ಮ ಸಹಾಯ ಈ ಜನ್ಮ ವಿರುವವರೆವಿಗೂ ಮರೆಯಲಾರೆ. ನೀವು ಮಾಡಿದ ಸಹಾಯಕ್ಕೆ, ನೀವು ಕೋರಿದ ಆದರಕ್ಕೆ ಎಷ್ಟುಕೊಟ್ಟರೆ...." ಎಂದು ಇನ್ನೂ ಏನೋ ಹೇಳುವಷ್ಟರಲ್ಲಿ, ಲೋಕೋಪಕಾರಿ "ಏನು! ಹಣ ಕೊಡಲೆಣಿಸಿದಿರೇನು? ಅಂದರೆ ನಿಮ್ಮ ಹಣಕ್ಕಾಗಿ ಹೀಗೆ ಸೇವೆ ಮಾಡುತ್ತಿರುವನೆಂದು ಭಾವಿಸಿದಂತೆ ತೋರುತ್ತೆ. ಕ್ಷಮಿಸಿ, ನಾನು ಅಂತಹವನಲ್ಲ. ನಿಮ್ಮದು ಒಂದು ಕಾಸಾದರೂ ನನಗೆ ಬೇಡ. ಕೇವಲ ಲೋಕೋಪಕಾರವೇ ನನ್ನ ಜೀವನದ ಗುರಿ" ಎಂದ.

ವೈಕುಂಟರಾಯರು "ಮನ್ನಿಸಿ ಸ್ವಾಮಿ. ಒಂದು ವಾರ ನಿಮ್ಮ ಸಂಗಡವಿದ್ದೂ ನಿಮ್ಮನ್ನು ಅರ್ಥ ಮಾಡಿಕೊಳ್ಳಲಾರದೆ, ನಿಮ್ಮ ಮನ ನೋಯಿಸಿದೆ. ಆದರೆ ನೀವು ಒಂದು ನೂರು ರೂಪಾಯಿಗಳಾದರೂ ಅಂಗೀಕರಿಸಲೇ ಬೇಕು. ಇದನ್ನು ಲೋಕೋಪಕಾರಕ್ಕೆ ವಿನಿಯೋಗಿಸಿ" ಎಂದರು ಅತಿ ವಿನಯದಿಂದ.

"ಸರಿ, ಹಾಗಾದರೆ ಅದರೊಳಕ್ಕೆ ಹಾಕಿ" ಎಂದು ಅಲ್ಲೇ ಇದ್ದ ಒಂದು ಹುಂಡಿ ತೋರಿಸಿದ. ವೈಕುಂಟರಾಯರು ರೂಪಾಯಿಯ ನೋಟೊಂದನ್ನು ಅದರಲ್ಲಿ ಹಾಕಿದರು.

ಆ ಸಾಯಂಕಾಲ ಅವರಿಬ್ಬರೂ ಊರೊಳಗೆ ಹೋಗಿ, ಕೊನೆಯ ಸಾರಿ ವಿಶ್ವೇಶ್ವರನ ದರ್ಶನ ಮಾಡಿಕೊಂಡು, ಕತ್ತಲಾಗುವ ವೇಳೆಗೆ ಮನೆಗೆ ಹಿಂತಿರುಗಿದರು.




ವೈಕುಂಟರಾಯರು ಕೋಣೆ ಬಾಗಿಲು ತೆಗೆದು ನೋಡಿದರೆ ಕಂಡ ದೃಶ್ಯವಾದರೂ ಏನು? ಪೆಟ್ಟಿಗೆಯ ಬಾಗಿಲು ತೆಗೆದಿದೆ. ಬಟ್ಟೆಗಳೆಲ್ಲವೂ ವ್ಯವಸ್ಥಿತವಾಗಿಯೇನೋ ಇದ್ದವು, ಆದರೆ ಹಣ ಒಂದು ಕಾಸಾದರೂ ಕಾಣಿಸಲಿಲ್ಲ. ಇಷ್ಟರಲ್ಲಿ ಲೋಕೋಪಕಾರಿ ಸಹ ಅಲ್ಲಿಗೆ ಬಂದು "ನಿಮ್ಮ ಸಾಮಾನುಗಳೆಲ್ಲ ಇದೆತಾನೇ" ಎಂದ.

"ಊಂ, ಸಾಮಾನೇನೋ ಇದೆ. ಆದರೆ ಪೆಟ್ಟಿಗೆಯಲ್ಲಿದ್ದ ಹಣ ಹಾರಿಸಿಬಿಟ್ಟಿದ್ದಾರೆ. ವಿಚಿತ್ರವೇನೆಂದರೆ ಕೋಣೆಗೆ ಹಾಕಿದ ಬೀಗ ಹಾಕಿದಂತೆಯೇ ಇತ್ತು" ಎಂದರು.

"ಏನು! ಹಾಕಿದ್ದ ಬೀಗ ಹಾಕಿದಂತೆಯೇ ಇತ್ತೇ? ಆ ದುರ್ಮಾರ್ಗಿಗಳು ಯಾರೋ ಅಡಿಗೆ ಮನೆಯಲ್ಲಿದ್ದ ಮಡಕೆಗಳನ್ನೂ ಸಹ

ಚೂರುಚೂರು ಮಾಡಿ ಹೋಗಿದ್ದಾರೆ. ಎಷ್ಟು ದಿನದಿಂದ ಈ ಮನೆಯಲ್ಲಿದ್ದೇನೆ, ಆದರೆ ಎಂದೂ ಒಂದು ಪೊರಕೆಕಡ್ಡಿ ಸಹ ಕಳುವಾಗಿರಲಿಲ್ಲ. ನನ್ನ ಸಾಮಾನು ಹೋದುದಕ್ಕೆ ನಾನೇನು ಚಿಂತಿಸುತ್ತಿಲ್ಲ. ಇದೆಲ್ಲಾ ನನ್ನವಾಗಿದ್ದರಷ್ಟೇ. ಎಲ್ಲಾ ಪ್ರಜೆಗಳದು. ನಿಮಗಾಗಿ ನನಗೆ ತುಂಬಾ ಸಂತಾಪವಾಗುತ್ತಿದೆ" ಎಂದ. "ಏನು ಮಾಡೋಣ ಹೇಳಿ. ನಾನು ನತದೃಷ್ಟ. ನನ್ನ ಮೂಲಕ ನಿಮ್ಮ ಸಾಮಾನೂ ಹೋಯಿತು. ಏನು ಮಾಡುವಂತೆ ಹೇಳುವಿರಿ? ಪೋಲೀಸಿಗೆ ದೂರು ಕೊಡೋಣವೇ?" ಎಂದರು ವೈಕುಂಟರಾಯರು.

"ನಿಮ್ಮದೊಂದು ಭ್ರಾಂತು, ಎಲ್ಲೋ. ಹೋದ ಸಾಮಾನು ಮತ್ತೆ ಸಿಗುತ್ತದೆಯೇ ಅಂದ್ರೆ.. ರಿಪೋರ್ಟ್ ಕೊಡಲೇನು ಈ ಕ್ಷಣ ಕೊಡಬಹುದು. ಆದರೆ ಅದೆಲ್ಲಾ ವೃಥಾ ಪ್ರಯಾಸ. ನನ್ನ ಮಟ್ಟಿಗೆ ನಾನೇನೋ ದೂರು ಕೊಡೋಲ್ಲ. ಹೋದ ವಸ್ತುಗಳು ನನ್ನದಲ್ಲವಷ್ಟೆ. ಹಾಗದರೆ ನಾನುಹೇಗೆ ಮನೆ ಸೇರಲಿ ಅಂತ ನೀವು ಹೇಳುವಿರೇನೋ? ಹುಂಡಿಯಲ್ಲಿ ನೀವು ಹಾಕಿದ್ದ ಹಣ ತೆಗೆದುಕೊಂಡು ಬಿಡಿ, ಸರಿಹೋಗುತ್ತೆ" ಎಂದು ಲೋಕೋಪಕಾರಿ ಹುಂಡಿಯಿಂದ ನೂರು ರೂಪಾಯಿಯ ನೋಟನ್ನು ತೆಗೆದುಕೊಡಲು ಹೋದ. ವೈಕುಂಟರಾಯರು ಅಡ್ಡಿಬಂದು "ಎಲ್ಲಾ ಬೇಡಾಂದ್ರೆ, ಪ್ರಯಾಣದ ಕರ್ಚು ಮಾತ್ರ ಕೊಡಿ ಸಾಕು" ಎಂದರು.

"ನಿಮ್ಮಿಷ್ಟ" ಎಂದು ಲೋಕೋಪಕಾರಿ ನಲ್ವತ್ತು ರೂಪಾಯಿ ಮಾತ್ರ ಕೊಟ್ಟು, ವೈಕುಂಟರಾಯರನ್ನು ಅಂದು ರಾತ್ರಿಯೇ ಸಾಗಹಾಕಿದ.

ಒಂದು ವರ್ಷ ಕಳೆಯಿತು. ಒಂದು ದಿನ ಬೆಳಗ್ಗೆ ವೈಕುಂಟರಾಯರು ಪೇಪರು ಓದುತ್ತಿದ್ದರೆ ಒಂದು ಸುದ್ದಿ ಕಾಣಿಸಿತು. "ಕಾಶಿ ಯಾತ್ರೆಗೆ ಬರುವ ಪ್ರಯಾಣಿಕರನ್ನು ಮೋಸಗೊಳಿಸುತ್ತಾ ಬಂದ 'ಲೋಕೋಪಕಾರಿ' ಗುಂಪಿನ ದಸ್ತಗಿರಿ! ಲೋಕೋಪಕಾರಿಗೆ ಮೂರು ವರ್ಷ ಕಠಿನ ಶಿಕ್ಷೆ" ಎಂದಿತ್ತು. ಸುದ್ದಿ ಪೂರ್ತಿ ಓದಿದ ತರುವಾಯ, ಮೊಗಲ್‌ಸಾರಾಯಿಯಲ್ಲಿ ತಮಗೆ ಪರಿಚಯವಾದ ಆ ಸ್ನೇಹಿತ, ಬೀಗದ ಅಂಗಡಿಯಾತ ಮತ್ತೆ ಕೆಲವು ಜನ ಒಂದು ಗುಂಪೆಂತಲೂ, ಆ ಗುಂಪಿಗೆಲ್ಲಾ ನಾಯಕ ಲೋಕೋಪಕಾರಿಯೆಂತಲೂ ವೈಕುಂಟರಾಯರಿಗೆ ತಿಳಿದು ಮನೆಯವರಿಗೆ ಹೇಳಲು, ಅವರೆಲ್ಲರೂ ಗಹಗಹಿಸಿ ನಕ್ಕರು.






ಬುದ್ಧ ಭಗವಾನನು ಅವತರಿಸಿದ ಕಾಲದಲ್ಲಿ ಸವರನೆಂಬ ಒಬ್ಬ ಬೇಟೆಗಾರನಿದ್ದ. ಅವನಿಗೆ ಬಿಲ್ಲು ಬಗ್ಗಿಸಿ, ಬಾಣಬಿಡುವ ಶಕ್ತಿಯೂ, ಗುರಿತಪ್ಪದೆ ಹೊಡೆಯುವ ನಿಶಿತ ದೃಷ್ಟಿಯೂ ಇತ್ತು. ಅಷ್ಟೇ ಅಲ್ಲದೆ, "ನನ್ನಂತಹ ಬೇಟೆಗಾರನು ಈ ಹದಿನಾಲ್ಕು ಲೋಕಗಳಲ್ಲೂ ಇಲ್ಲ" ಅಂತ ಅಹಂಕಾರವೂ ಸಹ ಇತ್ತು. ಮುಂಜಾನೆಯಿಂದ ಸಂಜೆಯ ವರೆವಿಗೂ ಜಂತುಗಳನ್ನು ಬೇಟೆಯಾಡಿ ಕೊಲ್ಲುವುದೇ ಅವನ ಕೆಲಸ. ಆ ಬೇಟೆಯೆಲ್ಲಾ ಮಾಂಸದ ಸಲುವಾಗಿಯೇ ಅಂತಹ ಅಂದರೆ ಅದಲ್ಲ. ಬಾಣದೇಟಿಗೆ ಬಿದ್ದ ಜಂತು ವಿಲವಿಲ ಒದ್ದಾಡುತ್ತಿದ್ದರೆ, ಅದನ್ನು ನೋಡುವುದೇ ಅವನಿಗೊಂದು ಆನಂದ. ಅದಕ್ಕಾಗಿ ಈರೀತಿ ಬೇಟೆಯಾಡುತ್ತಿದ್ದ.

ಕರುಣಾಮಯನಾದ ಬುದ್ಧಭಗವಾನನು ಅವನಿಗೆ ಬುದ್ಧಿ ಹೇಳಬೇಕೆಂದು ಯೋಚಿಸಿದ. ನಾವೂ ನೀವೂ ಆಗಿದ್ದರೆ ಸವರನೊಂದಿಗೆ 'ಎಲೋ, ಅಯ್ಯಾ, ಏನಿದು ಕೆಲಸ?' ಎಂದು ಗದರಿಸಿಕೊಳ್ಳುತ್ತಿದ್ದೆವು.

ಬುದ್ಧದೇವನ ಪದ್ಧತಿ ಅದಲ್ಲ. ಯಾರು ಯಾವ ತಪ್ಪನ್ನೇ ಮಾಡಿದರೂ 'ಇದು ತಪ್ಪು' ಎಂದು ಅವನಷ್ಟಕ್ಕೆ ಅವನೇ ತಿಳಿದುಕೊಳ್ಳುವಂತೆ ಮಾಡುತ್ತಿದ್ದ.

ಒಂದು ದಿನ ಸವರನು ಯಥಾಪ್ರಕಾರ ಅರಣ್ಯಕ್ಕೆ ಬರಲು, ಆತನೂ ಸಹ ಸರಿಯಾಗಿ ಸವರನಂತೆಯೇ ಸಿದ್ಧನಾಗಿ ಅವನಿಗೆ ಎದುರಾದ. ಸವರ "ಯಾರಯ್ಯಾ ನೀನು?" ಎಂದು ಗದರಿಸಿ ಕೇಳಿದ.

"ನಾನೊಬ್ಬ ಬೇಟೆಗಾರ. ನನ್ನ ಹೆಸರು ಸವರ" ಎಂದ ಬುದ್ಧ.

ಈ ಮಾತು ಕೇಳಿ ನಿಜವಾದ ಸವರನಿಗೆ ಕೋಪದೊಂದಿಗೆ ಆಶ್ಚರ್ಯವೂ ಉಂಟಾಯಿತು. 'ನನ್ನ ಅರಣ್ಯದಲ್ಲಿ ಪ್ರವೇಶಮಾಡಿದ್ದು ಮಾತ್ರವಲ್ಲದೆ ನನ್ನ ಹೆಸರನ್ನೂ ಇಟ್ಟುಕೊಂಡಿದ್ದಾನಲ್ಲಾ ಭೂಪ!' ಎಂದುಕೊಂಡು "ಸುಮ್ಮನೆ ದಷ್ಟಪುಷ್ಟವಾಗಿದ್ದರೆ ಸಾಕಾಯಿತೇ? ನನಗಿರುವ ಚಾಕಚಕ್ಯತೆ, ಕೌಶಲ್ಯ ಇರಬೇಕು ನಾನು ಎಷ್ಟೇ ವೇಗವಾಗಿ ಓಡುವ ಜಿಂಕೆಯನ್ನಾದರೂ ಒಂದೇ ಶರದಿಂದ ಗುರಿತಪ್ಪದಂತೆ ಹೊಡೆಯಬಲ್ಲೆ. ನೀನೂ ಆ ರೀತಿ ಹೊಡೆಯುವೆಯಾ?" ಎಂದ.

ಬಿ. ಜಾನಕಿ, ಮಲ್ಲೇಶ್ವರಂ.




ಹೊಸ ಬೇಟೆಗಾರ ಕಿರುನಗೆನಕ್ಕು "ಒಂದು ಜಿಂಕೆ ಮಾತ್ರವಲ್ಲ, ಒಂದೇಟಿಗೆ ನೂರಾರು ಜಿಂಕೆಗಳನ್ನು ಹೊಡೆಯಬಲ್ಲೆ" ಎಂದ.

"ನನ್ನ ಹತ್ತಿರ ಬಡಾಯಿ ಕೊಚ್ಚಬೇಡ, ಜಂಬದ ಕೋಳಿ" ಎಂದು ಪಕಪಕ ನಗಲು ಪ್ರಾರಂಭಿಸಿದ.

"ಬಡಾಯಿ ಅಲ್ಲ, ನಿಜ. ನೋಡುವೆಯಂತೆ ಬಾ" ಎಂದು ಸಂಗಡ ಕರೆದುಕೊಂಡು ಹೋದ.

ಅವರಿಬ್ಬರೂ ಹತ್ತುಮಾರು ಹೋದರೋ ಇಲ್ಲವೋ ದೂರದಲ್ಲಿ ಜಿಂಕೆಗಳ ಗುಂಪೊಂದು ಕಾಣಿಸಿತು. ಮೂವತ್ತು ವರ್ಷದಿಂದ ಆ ಅಡವಿಯಲ್ಲೇ ತಿರುಗಾಡುತ್ತಿದ್ದರೂ ಸವರನಿಗೆ ಎಂದೂ ಅಷ್ಟೊಂದು ಜಿಂಕೆಗಳು ಒಟ್ಟಾಗಿ ಕಾಣಿಸಿರಲಿಲ್ಲ. ಆದ್ದರಿಂದ "ಎಷ್ಟೊಂದು ಜಿಂಕೆಗಳು! ನೂರರ ಮೇಲೆಯೇ ಇರಬಹುದು" ಎಂದ.

ಆಗ ಹೊಸ ಬೇಟೆಗಾರ "ಊಹೆಗೀಹೆ ಯಾಕೆ. ನಾನು ನನ್ನ ಬಾಣದಿಂದ ಅವುಗಳೆಲ್ಲವನ್ನೂ ಕೆಡಹುತ್ತೇನೆ, ನೀನು ಹೋಗಿ ಲೆಕ್ಕ ಮಾಡುವೆಯಂತೆ" ಎಂದ. ಕೂಡಲೇ ಒಂದು ಬಾಣವನ್ನು ಜಿಂಕೆಯ ಗುಂಪಿಗೆ ಗುರಿಯಿಟ್ಟು ಹೊಡೆದ. ಆ ಬಾಣ ಮನೋವೇಗದಿಂದ ಹೋಗಿ ಒಂದರಪಕ್ಕದಲ್ಲೊಂದು ಓಡುತ್ತಿದ್ದ ಆ ಜಿಂಕೆಗಳ ಕಂಠದಿಂದ ತೂರಿಕೊಂಡು ಹೋಗಿ, ಜಿಂಕೆಗಳೆಲ್ಲವೂ ವೀಳೆಯದೆಲೆಯ ಪಿಂಡಿಯಂತೆ ಒಂದೇ ಸಾರಿ ನೆಲದ ಮೇಲೊರಗಿದವು.

ಆಗ ಭಗವಾನನು "ಹೋಗಯ್ಯಾ ಹೋಗು. ಎಷ್ಟು ಜಿಂಕೆಗಳು ಬಿದ್ದಿದೆಯೋ ಲೆಕ್ಕ ಮಾಡಿಕೊಂಡು ಬಾ. ಬರುವಾಗ ಒಂದನ್ನು ತಂದುಕೋ. ನಿನಗೂ ನಿನ ಸಂಸಾರಕ್ಕೂ ನಾಲ್ಕುದಿನ ಊಟಕ್ಕೆ ಸಾಕಾಗುತ್ತದೆ" ಎಂದ.

ಸವರನು ಹೋಗಿ ಬಿದ್ದಿದ್ದ ಜಿಂಕೆಗಳನ್ನು ಲೆಕ್ಕ ಮಾಡಿದ. ಸರಿಯಾಗಿ ಐನೂರೂ ಜಿಂಕೆಗಳಿದ್ದವು. "ಎಲಎಲಾ, ಒಂದು ಬಾಣದಿಂದ ಐನೂರೂ ಕೆಡಹಿದ. ಈತನು ಯಾರೋ ಮಾಟಗಾರನಿರಬೇಕೇ ಹೊರತು ಸಾಮಾನ್ಯ ಆಸಾಮಿಯಲ್ಲ. ಸವರನು ಅವುಗಳಲ್ಲೊಂದನ್ನು ಎತ್ತಲು ಯತ್ನಿಸಿದ. ಆದರೆ ಅದನ್ನು ಎತ್ತಲು ಆತನ ಕೈಯಲ್ಲಿ ಸಾಗ

ಡಾಯಿತು. ಆನೆಯನ್ನಾದರೂ ಲೀಲಾಜಾಲವಾಗಿ ಎತ್ತಿ ಹಾಕಬಲ್ಲ ಶಕ್ತಿ ಸವರನಿಗಿತ್ತು. ಹಾಗಿರುವಾಗ ಒಂದು ಜಿಂಕೆಯನ್ನು ಎತ್ತೋಣವೆಂದು ಪ್ರಯತ್ನಿಸಿದ. ಆದರೆ ಯಾವ ಜಿಂಕೆಯನ್ನು ಕದಲಿಸಿದರೂ ತುಂಬಾ ಭಾರವಾಗಿರುವಂತೆ ಕಂಡುಬಂತು. ಆದ್ದರಿಂದ ಅವನು ಬರಿಗೈಯಲ್ಲಿಯೇ ಬರಬೇಕಾಯಿತು.

ಬಂದಕೂಡಲೇ ಸವರನು ಹೊಸ ಬೇಟೆಗಾರನ ಕಾಲುಗಳ ಮೇಲೆಬಿದ್ದು, ನೀವು ಯಾರೋ ಅಸಮಾನ್ಯರಂತೆ ಕಾಣುವುದು. ಒಂದೇಟಿಗೆ ಐನೂರು ಜಂತುಗಳನ್ನು ಹೇಗೆ ಕೆಡಹಿದಿರಿ. ಈ ರಹಸ್ಯ ನನಗೆ ದಯವಿಟ್ಟು ಹೇಳಿ" ಎಂದು ಬೇಡಿಕೊಂಡ. ಬುದ್ಧ ಭಗವಾನನು "ಈ ಬೇಟೆಯ ರಹಸ್ಯ ತಿಳಿದುಕೊಳ್ಳಬೇಕಾದರೆ ನೀನು ಕಡೇ ಪಕ್ಷ ಮಾಂಸವನ್ನು ಒಂದು ತಿಂಗಳಾದರೂ ಮುಟ್ಟಕೂಡದು, ಹಣ್ಣು ಹಂಪಲುಗಳನ್ನೇ ತಿನ್ನಬೇಕು. ಪ್ರಾಣಿ ಹಿಂಸೆ ಮಾಡಕೂಡದು ಹೀಗೆ ದೀಕ್ಷೆಯಿಂದ ಒಂದು ತಿಂಗಳ ಕಾಲ ಕಳೆದರೆ ಆಗ ನಾನು ನಿನಗೆ ಇದರ ರಹಸ್ಯ ಹೇಳುವೆನು" ಎಂದ.

ಸವರನು "ಸರಿ" ಎಂದ. "ತಿಂಗಳಾದ ತರುವಾಯ ಬರುತ್ತೇನೆ" ಎಂದು ಮಾಯಾ ಬೇಟೆಗಾರನು ಹೊರಟುಹೋದ.

ಮೊದಲಿನಿಂದ ಮಾಂಸ ತಿಂದು ಅಭ್ಯಾಸವಾಗಿದ್ದ ಸವರನಿಗೆ ಅದನ್ನು ತ್ಯಜಿಸಲು ಪ್ರಾರಂಭದಲ್ಲಿ ಕಷ್ಟಕರವಾಗಿ ಕಂಡುಬಂತು. ಚಿಕ್ಕಂದಿನಿಂದ ಬೇಟೆಯಾಡುವುದು ಅಭ್ಯಾಸವಾದವನಿಗೆ ಬಿಲ್ಲು ಬಾಣಗಳನ್ನು ಒಂದುಕಡೆ ನೇತು ಹಾಕಿದಕೂಡಲೇ ಹೊತ್ತು ಕಳೆಯುವುದು ಕಷ್ಟವಾಯಿತು. ಆದರೆ ರಹಸ್ಯವನ್ನು ಅರಿಯಬೇಕೆಂದು ದೀಕ್ಷೆವಹಿಸಿದುದರಿಂದ ಬಿಲ್ಲ ಹಿಡಿಯದೆ, ಮಾಂಸ ತಿನ್ನದೆ ವ್ರತವನ್ನು ಕಾಪಾಡಿಕೊಳ್ಳುತ್ತಾ ಬಂದ. ಕ್ರಮೇಣ ಇದು ಅಭ್ಯಾಸವಾಗಿ, ಮಾಂಸ ತಿನ್ನದಿದ್ದರೂ ಜೀವಿಸಬಹುದೆಂಬ ವಿಷಯ ಅವನಿಗೆ ತಿಳಿದು ಬಂತು. 'ಆಹಾರಕ್ಕೆಂದು ಒಂದು ಜಂತುವಿನ ಪ್ರಾಣ ಏಕೆ ತೆಗೆಯ ಬೇಕು?' ಎಂದು ತೋರಿತು. ಇಂತಹ ಆಲೋಚನೆಗಳಲ್ಲಿ ಮುಳುಗಿದ್ದ ಸವರನಿಗೆ ಈವರೆವಿಗೆ ತಾನು ವಿನೋದಕ್ಕೆ ಬಾಣಗಳಿಂದ ಹೊಡೆದ ಜಂತುಗಳೆಲ್ಲಾ ವಿಲವಿಲನೆ ಒದ್ದಾಡುತ್ತಿರುವದೃಶ್ಯ ಕಣ್ಣುಮುಂದೆ ಪ್ರತ್ಯಕ್ಷವಾದಂ



ತಾಯಿತು. 'ಬಾಯಿಯಿಲ್ಲದ ಈ ಮೂಕ ಜೀವಿಗಳನ್ನು ಕೊಂದುದಾದರೂ ಏಕೆ? ನನ್ನ ವಿನೋದ ಹಾಳಾಗಲಿ' ಎಂದೆನ್ನಿಸಿತು. ಪ್ರಾಣಿಗಳೆಂದರೆ ಹೊಸದಾಗಿ ಕನಿಕರ ಗೌರವಗಳುಂಟಾಗಿ ಕಿರಾತನಾದ ಸವರನು ಪರಮ ಸಾಧುವಾಗಿ ಬದಲಾಯಿಸಿದ.

ಅವಧಿಯದಿನ ಬುದ್ಧಭಗವಾನನು ಮತ್ತೆ ಬೇಟೆಗಾರನ ರೂಪದಲ್ಲಿ ಬಂದು "ಸವರಾ, ಆ ರಹಸ್ಯ ಹೇಳಲೇ?" ಎಂದ.

ಸವರನು ಗಡಗಡ ನಡುಗುತ್ತಾ "ಬೇಡ, ಸ್ವಾಮಿ, ಬೇಡ. ಏಟಿಗೊಂದು ಪ್ರಾಣಿಯಂತೆ ಎಷ್ಟೋ ಪ್ರಾಣಗಳನ್ನು ತೆಗೆದು ಪಾಪದ ರಾಶಿಯನ್ನು ಮೂಟೆ ಕಟ್ಟಿಕೊಂಡಿದ್ದೇನೆ. ನಿನ್ನ ರಹಸ್ಯ ತಿಳಿದು, ಏಟಿಗೆ ಐನೂರರಂತೆ ಕೊಂದು ಇನ್ನೂ ನರಕಕೂಪದಲ್ಲಿ ಬೀಳುವಂತೆ ಹೇಳುವೆಯಾ?" ಎಂದು ಪಶ್ಚಾತ್ತಾಪ ಪಟ್ಟ. ಆಗ ಬುದ್ಧಭಗವಾನನು ತನ್ನ ನಿಜರೂಪದಲ್ಲಿ ಪ್ರತ್ಯಕ್ಷವಾಗಿ "ಸವರಾ ಚಿಂತೆ ಪಡಬೇಡ. ಈ ದೀಕ್ಷೆಯಲ್ಲೇ ಕಡೆಯತನಕ ಇರು" ಎಂದ.

ಸವರನು ಭಗವಾನನ ಪಾದಗಳ ಮೇಲೆ ಬಿದ್ದು "ಸ್ವಾಮಿ, ನನ್ನಲ್ಲಿ ಪ್ರಾಣಿ ದಯೆ ಉಂಟಾಗಲು ನೀವು ಬೇಟೆಗಾರನ ರೂಪದಲ್ಲಿ ಬಂದಿರುವಿರೆಂಬ ವಿಷಯ ಅಂದು ತಿಳಿಯದಾದೆ. ಪ್ರಭೂ, ನನಗೊಂದು ಸಂದೇಹವಿದೆ. ಆ ದಿನ ತಾವು ಒಂದು ಬಾಣದಿಂದ ಐನೂರು ಜಿಂಕೆಗಳನ್ನು ಬೀಳಿಸಿದಿರಿ. ನಾನು ತುಂಬಾ ಬಲಿಷ್ಠನಾದರೂ ಒಂದನ್ನಾದರೂ ಎತ್ತಲಾರದೆ ಹೋದೆ. ಏಕೆ?" ಎಂದು ಕೇಳಿದ.

ಭಗವಾನನು "ಅಪ್ಪಾ ಅದೊಂದು ಪ್ರಶ್ನೆಯೇ! ಎಷ್ಟು ಪ್ರಾಣಗಳನ್ನಾದರೂ ಕೆಡಹೆಬಲ್ಲೆವು. ಅದರೊಂದನ್ನೂ ಮೇಲೆತ್ತಲಾರೆವು. ಈ ವಿಷಯ ನಿನಗೆ ತಿಳಿಯುವ ಸಲುವಾಗಿಯೇ ಅವುಗಳ ಭಾರ ತಿಳಿಯುವಂತೆ ಮಾಡಿದೆ. ಎಷ್ಟು ಪ್ರಾಣಗಳನ್ನಾದರೂ ತೆಗೆಯಬಹುದೇ ಹೊರತು ಒಂದು ಪ್ರಾಣವನ್ನಾದರೂ ಹಿಂದಕ್ಕೆ ಕೊಡಲಾರೆವು ಸವರಾ! ಪ್ರಾಣಕೊಡಲು ಶಕ್ತಿಯಿಲ್ಲದ ನಮಗೆ ಪ್ರಾಣ ತೆಗೆಯಲು ಮಾತ್ರ ಹಕ್ಕು ಎಲ್ಲಿದೆ? ಆದ್ದರಿಂದಲೇ ಜೀವಹಿಂಸೆ ಮಹಾಪಾಪವೆಂದು ಹಿರಿಯರು ಹೇಳುವರು" ಎಂದು ಸವರನಿಗೆ ಮೋಕ್ಷ ಮಾರ್ಗವನ್ನು ತೋರಿಸಿ ಅಂತರ್ಧಾನ ಹೊಂದಿದನು.



## ಜಿರಾಫೆಯ ಕತ್ತು ಉದ್ದವಾಗಿರುತ್ತದೆ



ಏಕೆ-ಗೊತ್ತೆ?

ಪೂರ್ವಕಾಲದಲ್ಲಿ ಖಡ್ಗಮೃಗವೂ ಜಿರಾಫೆಯೂ ತುಂಬಾ ಗೆಳೆತನದಿಂದ ಇದ್ದರು. ಒಂದುದಿನ ಅವು ಮೈದಾನದಲ್ಲಿ ಮೇಯುತ್ತಿರುವಾಗ ಖಡ್ಗಮೃಗ ಹೀಗೆ ಹೇಳಿತು: "ಗೆಳೆಯಾ, ಗೆಳೆಯಾ, ನಾವು ತುಂಬಾ ಕುಳ್ಳರಾಗಿರುವುದರಿಂದ ಸಿಕ್ಕ ಸಿಕ್ಕ ಜಂತುಗಳು ಕಾಲಿನಿಂದ ತುಳಿದ ಈ ಹುಲ್ಲನ್ನು ಮೇಯಬೇಕಾದ ಗ್ರಹಚಾರ ಬಂದಿದೆ. ನಮಗೆ ಉದ್ದವಾದ ಕತ್ತು ಇದ್ದಿದ್ದಪಕ್ಷಕ್ಕೆ ಮರಗಳಮೇಲಿರುವ ಪರಿಶುದ್ಧವಾದ ಚಿಗುರೆಲೆಗಳನ್ನು ಅವಶ್ಯಕವಾದಾಗ ಕಿತ್ತು ತಿನ್ನಬಹುದಿತ್ತು" ಎಂದು.

ಇದಕ್ಕೆ ಜಿರಾಫೆ "ನಾವು ಹೀಗೇಯೇ ಇರಬೇಕೆಂದು ದೇವರ ಇಚ್ಛೆಯಾಗಿರುವಾಗ ಮಾಡುವುದಾದರೂ ಏನಿದೆ? ಅನುಭವಿಸಲೇಬೇಕಷ್ಟೆ!" ಎಂದು ತತ್ವಜ್ಞಾನಿಯಂತೆ ನುಡಿಯಿತು.

ಆಗ ಖಡ್ಗಮೃಗವು ತುಂಬಾ ಹೊತ್ತು ಆಲೋಚಿಸಿ ಹೀಗೆಂದಿತು. "ಮಿತ್ರನೇ, ನನಗೊಂದು ಸೊಗಸಾದ ಉಪಾಯ ತೋರುತ್ತಿದೆ. ಅದೇನೆಂದರೆ, ದೇವರನ್ನೂ ಸಹ ಧಿಕ್ಕರಿಸಬಲ್ಲ ಬುದ್ಧಿಚಾತುರ್ಯವುಳ್ಳ ಮಾನವನಿದ್ದಾನೆ. ಅವನ ಶಕ್ತಿಗೆ ಮೀರಿದ ಶಕ್ತಿ ಬೇರೆ ಇಲ್ಲವೇ ಇಲ್ಲ. ಆದ್ದರಿಂದ ಆತನಲ್ಲಿಗೆ ಹೋಗಿ ಆಶ್ರಯಿಸಿದರೆ ಉಚಿತ ಉಪಾಯ ಹೇಳುವನು."

ಆಪ್ರಕಾರವೇ ಎರಡೂ ಒಟ್ಟಿಗೆ ಕಲೆತು ಮಾನವನ ಹತ್ತಿರಕ್ಕೆ ಹೋಗಿ ತಮ್ಮ ಅಭಿಲಾಷೆ ವ್ಯಕ್ತಪಡಿಸಿದವು. ಮಾನವನು ಅವು ಹೇಳಿದುದೆಲ್ಲವನ್ನೂ ಕೇಳಿ ಅವುಗಳಿಗೆ ಉಪಕಾರಮಾಡಲು ಒಪ್ಪಿಕೊಂಡನು. ನೀವಿಬ್ಬರೂ ಇಂತಹದಿನ ಸಪ್ತಮಿ ಬುಧವಾರ ಬೆಳಗ್ಗೆ ಮೂರು ಗಂಟೆಗಳಿಗೆಲ್ಲಾ ಬನ್ನಿ. ನಿಮ್ಮ ಕೋರಿಕೆ ನೆರವೇರಿಸುವೆನು. ಆದರೆ ನಾನು ಇಟ್ಟ ಸುಮೂಹೂರ್ತ ಒಂದು ಗಳಿಗೆ ಸಹ ತಪ್ಪಲವಕಾಶವಿಲ್ಲ. ಈ ವಿಷಯದಲ್ಲಿ ನಾನು ತುಂಬಾ ಖಚಿತವಾಗಿರುತ್ತೇನೆ. ನೆನೆಪಿರಲಿ' ಎಂದು ಖಂಡಿತವಾಗಿ ನುಡಿದ.

"ಓ ಅದಕ್ಕೇನಂತೆ. ಸಮಯಕ್ಕೆ ಸರಿಯಾಗಿ ಬರುವುದು ಒಂದು ಮಹಾ ಕಷ್ಟವೇ?»

ಮುತ್ತಜ್ಞ.

ಎಂದುಕೊಂಡು ಆ ಪ್ರಾಣಿಗಳು "ಹಾಗೆಯೇ ಬರುವೆವು" ಎಂದಿತು.

ಹೇಳಿದ್ದ ದಿನ ಬೆಳಗ್ಗೆ ಮೂರು ಗಂಟೆಗೆ ಶುಸಮೊದಲೇ ಜಿರಾಫೆ ಹೋಗಿ ಮಾನವನ ಮುಂದೆ ಸಿದ್ಧವಾಗಿ ನಿಂತಿತು. ಆತನು ಜಪ ವನ್ನು ಮುಗಿಸಿ ಎದ್ದು ನಿಂತು "ಬಂದಿರಾ?" ಎಂದು ಕೇಳಿದ. "ಅಯ್ಯಾ, ಖಡ್ಗಮೃಗ ನನ್ನೊಂದಿಗೆ 'ನೀನು ಹೋಗುತ್ತಿರು, ಹಿಂದೆ ಯೇ ಬರುವೆನು' ಎಂದಿತು" ಎಂದು ಹೇಳಿತು ಜಿರಾಫೆ. ಆಗ ಮಾನವನು ಬೇಸರಗೊಂಡು "ಸರಿ, ನೀನು ಇತ್ತ ಬಾ. ಸಮಯವಾಯಿತು. ಬಾಯಿ ತೆಗೆ" ಎಂದ. ಅದು ಬಾಯಿ ತೆಗೆದ ಕೂಡಲೇ ಮಾನವನು ಮೂಲಿಕೆಯೊಂದನ್ನು ಹಾಕಿ, ಕಮಂಡಲದಲ್ಲಿದ್ದ ಮಂತ್ರಜಲವನ್ನು ಸುರಿದ. ಆ ಜಲ ಗಂಟಲಲ್ಲಿ ಇಳಿಯಿತೋ ಇಲ್ಲವೋ, ಜಿರಾಫೆಯ ಕೆಳಗಿನ ಕಾಲುಗಳೂ ಮೇಲಿನ ಕತ್ತು ಉದ್ದವಾಗಿ ಬೆಳೆದುಬಿಟ್ಟಿತು.

ಜಿರಾಫೆ ಮಾನವನಿಗೆ ಕೃತಜ್ಞತೆ ಸೂಚಿಸುತ್ತಾ "ಅಯ್ಯಾ ನನ್ನ ಮಿತ್ರನ ವಿಷಯ....?" ಎಂದು ಹೇಳುತ್ತಿರುವಲ್ಲಿ, ಮಾನವನು "ಮಾತು ತಪ್ಪಿದವರ ಗತಿ ಅಷ್ಟೇ" ಎಂದು ಮತ್ತೊಂದು ಬೇರನ್ನು ತಂದು ಜಿರಾಫೆಯ ಬಾಯಿಯಲ್ಲಿ ಹಾಕುತ್ತಾ "ನಿನ್ನ ಗೆಳೆಯನಿಗಾಗಿಟ್ಟಿದ್ದ ಔಷಧಿಯನ್ನೂ ಸಹ ನಿನಗೇ ಉಪಯೋಗಿಸುತ್ತಿರುವೆನು. ಇದರಿಂದ ನಿನ್ನಲ್ಲಿ ಉಂಟಾದ ಬದಲಾವಣೆ ಶಾಶ್ವತವಾಗಿ ಉಳಿಯುತ್ತದೆ" ಎಂದು ಹೇಳಿ ಕಳುಹಿಸಿಬಿಟ್ಟನು.

ಜಿರಾಫೆ ಹೊಸರೂಪದಲ್ಲಿ ಅಡವಿಯೊಳಕ್ಕೆ ಹೊಕ್ಕು ಹುಲ್ಲು ಮೇಯುವುದನ್ನು ಬಿಟ್ಟು, ಮರಗಳ ಮೇಲಿರುವ ಚಿಗುರೆಲೆಗಳನ್ನು ಕಿತ್ತು ತಿನ್ನಲು ಉಪಕ್ರಮಿಸಿತು. ಅದು ಆ ರೀತಿ ತಿನ್ನುತ್ತಿರುವಾಗ ಅದರ ಗೆಳೆಯನಾದ ಖಡ್ಗ ಮೃಗ ಬಂದು ನೋಡಿ ಆಶ್ಚರ್ಯ ಹೊಂದಿತು. ಆಗ ಜಿರಾಫೆ ನಡೆದ ವಿಷಯವೆಲ್ಲ ವನ್ನೂ ಹೇಳಲು, ಖಡ್ಗಮೃಗ ದುರಹಂಕಾರ ದಿಂದ "ಸ್ವಲ್ಪಸಮಯ ಮೀರಿದರೆ ಮಾತ್ರ ನನಗಾಗಿ ಕಾದಿರಕೂಡದಿತ್ತೇ? ಆದರೂ ಈ ಮಾನವನನ್ನು ನಂಬಬಾರದು. ಇರು, ಅವನ ನ್ನೇನು ಮಾಡುವೆನೋ ನೋಡುವೆಯಂತೆ" ಎಂದು ಮಾನವನನ್ನು ಕೊಲ್ಲಲು ಪಣತೊಟ್ಟು ವಿರೋಧ ಕಟ್ಟಿಕೊಂಡಿತು.

ಮಾನವನ ಸ್ನೇಹವನ್ನು ಬೆಳೆಸಿದ ಜಿರಾಫೆ ಮಾತ್ರ ಇಂದಿಗೂ ಉದ್ದನೆಯ ಕತ್ತಿನೊಂದಿಗೆ ಇರುವುದು.



# ನೇಗಿಲ ಯೋಗಿ

೧

ಮುಂಜಾವಿಂದಾ ಸಂಜೆಯವರೆಗೆ
ದುಡಿವೆವು ಹೊಲದಲಿ ಶ್ರಮ ವಹಿಸಿ
ಚಳಿಮಳೆಗಾಳಿಯ ಪರಿವೆನುಗಿಲ್ಲ
ಬಿಸಿಲಿನ ಬೇಗೆಯು ಗೊಡವೆಯೆ ಇಲ್ಲ ॥

೨

ಅನುದಿನ ದುಡಿವುದು ನಮ್ಮಯಕರ್ಮ
ಫಲವನು ನೀಡ್ವುದು ಪ್ರಕೃತಿಯ ಧರ್ಮ
ಸಹನೆಯು ನಮ್ಮಯ ದುಡಿತದ ಮರ್ಮ
ತಿಳಿಯೆವು ನಾವೂ ಧರ್ಮಾಧರ್ಮ ॥

೩

ಕರ್ಮದಿ ಮೋಕ್ಷವ ಕಾಣುವರಾರು?
ದುಡಿತದಿ ಸಗ್ಗವ ನೋಡುವರಾರು?
ರಾಷ್ಟ್ರದ ಸಂಪತ್ತಿನ ಗನಿಯಾರು?
ಜನತೆಯ ಬೇಗೆಯ ನೀಗುವರಾರು?॥

೪

ಸುಖಕಷ್ಟಗಳಲಿ ಹಿಗ್ಗದೆಕುಗ್ಗದೆ
ಒಡಲಿನ ಬೇನೆಗೆ ರವವೂ ಜಗ್ಗದೇ
ಅಸ್ಥಿರ ವಾಗಿಹ ಬಾಳ್ವೆಯ ಜಯಿಸಿ
ಸ್ಥಿರಸುಖ ಸಗ್ಗದ ಮೋಕ್ಷವ ಬಯಸೀ ॥

೫

ಸ್ವಾತಂತ್ರ್ಯದ ಪಥದಲಿ ಮುನ್ನಡೆವೆವು
ನಾಡಿಗೆ ಸೇವೆಯ ಸಲಿಸುತಲಿರುವೆವು
ಭೂಮಾತೆಯ ನಿಜ ಮಕ್ಕಳು ಮರಿಗಳು
ಭುವಿಯಲಿ ನಾವ್ ನೇಗಿಲ ಯೋಗಿಗಳು.

—ಕೆ. ಸೀತಾರಾಮ ಅಡಿಗ; ಕೂರಾಡಿ.

## ಒಗಟುಗಳು

[ ಈ ಕೆಳಗಿನ 5 ಪದ್ಯಗಳೂ 5 ಒಗಟುಗಳು. ಅವುಗಳ ಉತ್ತರ ಅಯಾ ಪದ್ಯದೊಳಗೇ ಅಡಗಿವೆ ಸೂಕ್ಷ್ಮಮತಿಗಳು ಹುಡುಕಿದರೆ ಆ ಪದಗಳನ್ನು ಅಲ್ಲೇ ಕಂಡು ಹಿಡಿಯ ಬಹುದು. ಮಾಡಿರಿ ನೋಡೋಣ. ]

ಅರಳಿ ಗಮಗಮಿಸುತಿಹ।
ಜಾಜಿಮಲ್ಲಿಗೆಯು ॥
ಸೇರಿ ದೇವರ ತಲೆಯ।
ನೇರ್ವನಾ**ನಾರು**? ॥೧॥

ನಿನ್ನ ಸೇವಕನವನು।
ನೀ ಹೊಡೆಯಲಾರೆ ॥
ಉ**ಪವನ**ದಿ ಸುಳಿದರೂ।
ನೀ ನೋಡಲಾರೆ ॥೨॥

ನಡೆಯುವುದು ನುಡಿಯುವುದು।
ಜೀವ ವೇನಿಲ್ಲ ॥
ಅಕ್ಷರವ ನರಿಯದವ।
ರದ**ಕಾಗದ**ಲ್ಲ ॥೩॥

ಬಾಲರಿಗೆ ಪ್ರಿಯವಾದ।
ಚತುರ ಪ್ರಾಣಿಯಿದು ॥
ಕಾಡಿನಲ್ಲಿರುತಿಹುದು।
ನೀ**ನರಿ**ತರೊರೆಯು ॥೪॥

ಮಳೆ ಬಿಸಿಲ ಬಾಧೆಯಿಂ-।
ದೆನ್ನ ಸಲಹುವುದು ॥
ಎಲ್ಲ ಬೇಡುವರಾದ-।
ರಾರಿಗೂ **ಕೊಡೆ**ನು. ॥೫॥

—ಬಿ. ಸುಬ್ರಾಯ ಅಡಿಗ, ಗಂಗಲಿ.

# ಗುರುತು ಕಂಡ ಕಳ್ಳ

ಒಂದಾನೊಂದು ಕಾಲದಲ್ಲಿ ಚೈನಾದೇಶದಲ್ಲಿ ಒಬ್ಬ ದಯಾಳುವಾದ ಮತ್ತು ಅನುಕೂಲಸ್ಥನಾದ ವರ್ತಕನಿದ್ದನು. ಅವನ ಮನೆಯ ಕೆಲಸವನ್ನು ನೋಡಿಕೊಳ್ಳುವುದಕ್ಕೆ ಅನೇಕ ಜನ ಆಳುಗಳಿದ್ದರು.

ಒಂದು ದಿನ ಆ ವರ್ತಕನು ಒಂದು ಬಹಳ ಬೆಲೆ ಬಾಳುವ ಆಭರಣವನ್ನು ಕಳೆದುಕೊಂಡನು. ಅವನ ಆಳುಗಳಲ್ಲಿ ಯಾರೋ ಒಬ್ಬನು ಕದ್ದಿದ್ದಾನೆಂದು ಅವನಿಗೆ ತಿಳಿದಿದ್ದಿತು. ಆದರೆ ಅಷ್ಟು ನಂಬಿಗೆಯುಳ್ಳ ಆಳುಗಳಲ್ಲಿ ಇಂತಹವನೇ ಎಂದು ಕಂಡು ಹಿಡಿಯಲಾಗಲಿಲ್ಲ.

ಕಡೆಗೆ ಅವನಿಗೆ ಒಂದು ಉಪಾಯವು ಹೊಳೆಯಿತು. ಅವನು ಎಲ್ಲಾ ಆಳುಗಳನ್ನೂ ಕರೆಯಿಸಿ ತಾನು ಒಂದು ಮಾಯೆಯಿಂದ ಕಳ್ಳನನ್ನು ಪತ್ತೆ ಹಚ್ಚುತ್ತೇನೆ ಎಂದು ಹೇಳಿದನು.

ಆ ವ್ಯಾಪಾರಿಯು ಪ್ರತಿಯೊಬ್ಬ ಆಳಿಗೂ ಒಂದೇ ಅಳತೆಯುಳ್ಳ ಕೋಲನ್ನು ಕೊಟ್ಟನು. ಅನಂತರ "ಈ ಚಿತ್ತಗಳನ್ನು ನಿಮ್ಮ ಮನೆಗಳಿಗೆ ತೆಗೆದುಕೊಂಡು ಹೋಗಿ, ನಾಳೆ ದಿವಸ ಬೆಳಗ್ಗೆ ತೆಗೆದುಕೊಂಡು ಬನ್ನಿ. ನೀವು ಯಾರಾದರೂ ಕದ್ದಿಲ್ಲದಿದ್ದರೆ ಏನೂ ಆಗುವುದಿಲ್ಲ; ಆದರೆ, ನಿಮ್ಮಲ್ಲಿ ಯಾರಾದರೂ ಕಳ್ಳನಾಗಿದ್ದ ಪಕ್ಷದಲ್ಲಿ, ಈ ಕೋಲು ಈ ದಿನ ರಾತ್ರಿ ನನ್ನ ಮಂತ್ರಪ್ರಭಾವದಿಂದ ಒಂದು ಅಂಗುಲ ದೊಡ್ಡದಾಗಿ ಬೆಳೆಯುತ್ತದೆ" ಎಂದು ಹೇಳಿದನು.

ಆಳುಗಳು ಆತನ ಅಪ್ಪಣೆಯಮೇರೆ ಕೋಲುಗಳನ್ನು ಕೊಂಡುಹೋದರು. ಎಲ್ಲರೂ ಮಾರನೆಯ ದಿನ ಬೆಳಗ್ಗೆ ವರ್ತಕನ ಬಳಿಗೆ ಕೋಲುಗಳೊಡನೆ ಬಂದರು. ಆ ಕೋಲುಗಳನ್ನು ಸಾಲಾಗಿ ಇಟ್ಟರು. ಅವುಗಳಲ್ಲಿ ಒಂದು ಮಾತ್ರ ಚಿಕ್ಕದಾಗಿದೆಯೆಂದು ಸುಲಭವಾಗಿ ಕಂಡು ಬಂದಿತು.

ಆ ವರ್ತಕನು ತನ್ನ ಆಳುಗಳೊಂದಿಗೆ ಹೀಗೆಂದು ಹೇಳಿದನು "ಈ ಕೋಲು ಏತಕ್ಕೆ ಚಿಕ್ಕದಾಗಿದೆ ನಿಮಗೆ ಗೊತ್ತೋ? ನನ್ನ ಆಭರಣವನ್ನು ಕದ್ದ ಆಳು, ನನ್ನ ಮಾಯೆಯು ಆ ಕೋಲನ್ನು ಒಂದು ಅಂಗುಲ ದೊಡ್ಡದಾಗಿ ಬೆಳೆಸುತ್ತದೆ ಎಂದು ಭಯಪಟ್ಟನು. ಆದುದರಿಂದ ಅವನು ಆ ಕೋಲನ್ನು ಒಂದು ಅಂಗುಲ ಕತ್ತರಿಸಿ ಚಿಕ್ಕದಾಗಿ ಮಾಡಿದನು. ಈಗ ಕಳ್ಳ ಸಿಕ್ಕಿಬಿದ್ದನು" ಎಂದನು.

ಅನಂತರ ಆ ವರ್ತಕನು ಆ ಆಳಿನಕಡೆ ತಿರುಗಿ, "ನೀನೇ ಕಳ್ಳ. ಹೋಗಿ ನನ್ನ ಆಭರಣವನ್ನು ತೆಗೆದುಕೊಂಡು ಬಾ. ಇಲ್ಲದಿದ್ದರೆ ಅತ್ಯಂತ ಕಠಿಣ ಶಿಕ್ಷೆಗೆ ಒಳಪಡುವೆ" ಎಂದು ಹೇಳಿದನು. ಆ ಆಳು ಹೆದರುತ್ತಾ ಆ ಆಭರಣವನ್ನು ತಂದು ಕೊಟ್ಟನು.

ವ್ಯಾಪಾರಿಯ ಬುದ್ಧಿವಂತಿಕೆ ಅವನ ಆಭರಣವನ್ನು ವಾಪಸು ತಂದಿತು.

—ಸೌ|| ಬಾಲಾಂಬೆ, ಬೆಂಗಳೂರು.

## ಭಟ್ಟರ ಜುಟ್ಟು

ಭಟ್ಟರು ಇಬ್ಬರು ಒಟ್ಟಿಗೆಕೂಡಿ
ರಾಯರ ಮನೆಯನು ಸೇರಿದರು.
ಮಣಮಣ ಮಂತ್ರದ ಪೂಜೆಯಮುಗಿಸಿ
ಪಾಯಸದೂಟವ ಮಾಡಿದರು.
ರಾಯರ ಜಗುಲಲಿ ಚಾಪೆಯ ಹಾಸಿ
ಭಟ್ಟರು ಅಲ್ಲೇ ಮಲಗಿದರು.
ಮಲಗಿದ ಕೂಡಲೇ ನಿದ್ದೆಯು ಬರಲು
ಗೊರ್ ಗೊರ್ ಗೊರಕೆಯು ಕೇಳಿಸಿತು.
ಪುಟ್ಟನು ಗೊರಕೆಯ ಸದ್ದನು ಕೇಳಿ
ಮೆಲ್ಲನೆ ಓಡುತ ಹೊರಬಂದ.
ಭಟ್ಟರ ಜುಟ್ಟನು ನೋಡುತಲವನು
ಮನದಲಿ ಏನೇನೋ ಯೋಚಿಸಿದ.
ಹಂದಿಯ ಬಾಲದ ತೆರದಲಿ ಸುರುಳಿದ
ಇಬ್ಬರು ಭಟ್ಟರ ಜುಟ್ಟುಗಳು,
ಒಟ್ಟಿಗೆ ಸೇರಿಸಿ ಕಟ್ಟನು ಬಿಗಿದು
ದೂರಕೆ ನಿಂತನು ನಗುನಗುತ.
ಎಚ್ಚರ ವಾಗದ ಭಟ್ಟರ ನೋಡಿ
ಕೈ ಚಪ್ಪಾಳೆಯ ಹೊಡೆಯುತಲಿ
'ಓ, ಓ, ಭಟ್ಟರೆ ಬೇಗನೆ ಏಳಿ
ಕಾಫಿಗೆ ಕರೆವರು ನಿಮ್ಮನ್ನು?
ಎನ್ನಲು ಪುಟ್ಟನು, ಭಟ್ಟರೊಳೊಬ್ಬನು
'ಓ, ಓ, ಬಂದೆನು' ಎನ್ನುತಲಿ,
ಚಡಪಡನೇಳಲು ಜುಟ್ಟದು ಕೀಳಲು
ಪುಟ್ಟನು ಕಾಲ್ತೆಗೆದೋಡಿದನು.

—ಹೆಚ್. ಕೆ. ಜಯ

---

ಒಗಟಿಗೆ—ಉತ್ತರ

1. ಸಾರು. 2. ಪವನ. 3. ಕಾಗದ.
4. ನರಿ. 5. ಕೊಡೆ.

## ನಗೆಹನಿ

ಒಬ್ಬ— ಲೋ, ನಿನಗೆ ಪಾರ್ಲಿಮೆಂಟೆಂದರೆ ಗೊತ್ತೇನೋ?

ಇನ್ನೊಬ್ಬ— ಪಾರ್ಲಿಮೆಂಟೂ ಗೊತ್ತಿಲ್ಲ ಗವರ್ನಮೆಂಟೂ ಗೊತ್ತಿಲ್ಲಾಪ್ಪ, ನನಗೆ ಪೆಪ್ಪರಮೆಂಟು ಮಾತ್ರ ಗೊತ್ತು.

—ಪಿ. ಚಂದ್ರಶೇಖರ

* * *

ಒಬ್ಬ— ಈ ಕಾಲದಲ್ಲಿ ಜನ ಬಹಳ ಮೋಸ ಕಾಣ್ರಿ. ನೆನ್ನೆ ಒಬ್ಬ ನನಗೆ ಒಂದು ಸೀಸದ ಎಂಟಾಣೆ ಟೋಪಿ ಹಾಕಿಬಿಟ್ಟ.

ಇನ್ನೊಬ್ಬ—ಹಾಗಾದ್ರೆ ಆ ಎಂಟಾಣೆ ಏನು ಮಾಡಿದ್ರಿ?

ಒಬ್ಬ— ಹಾಲಿನವನಿಗೆ ದುಡ್ಡು ಕೊಡುವಾಗ ಸೇರಿಸಿ ಕೊಟ್ಟುಬಿಟ್ಟೆ.

* * *

ರಾಮು—ಏನಯ್ಯಾ! ನೀನು ಕೊಡಬೇಕಾದ 5 ರೂಪಾಯಿ ಬಾಕಿಗೆ ಎಷ್ಟು ಸಲ ತಿರುಗಿಸುತ್ತೀಯೆ?

ಭೀಮು—ಹೌದಯ್ಯಾ ಆ 5 ರೂ. ಸಾಲವಾಗಿ ಕೊಡಬೇಕಾದರೆ ನನ್ನನ್ನೆಷ್ಟು ಸಲ ತಿರುಗಿಸಿದೆ

—ಟಿ. ಎನ್. ಶ್ರೀನಿವಾಸರಾವ್.

* * *

ಮೇಷ್ಟ್ರು— ಲೋ ಕಿಟ್ಟು! ನೀನು ಎಷ್ಟನೇ ಇಸವಿಯಲ್ಲಿ ಹುಟ್ಟಿದೆಯೋ?

ಕಿಟ್ಟು—೧೯೪೦ನೇ ಇಸವಿ ಸಾರ್

ಮೇಷ್ಟ್ರು— ಹಾಗಾದರೆ ೧೯೪೭ನೇ ಆಗಸ್ಟ್ ೧೫ ನೇ ತಾರೀಖಿಗೆ ಏನಾಯಿತೋ?

ಕಿಟ್ಟು—ನನಗೆ ಏಳುವರ್ಷ ತುಂಬಿ ಮೇಲೆ ಎಂಟುತಿಂಗಳು ಹದಿನೈದು ದಿನ ವಾಯಿತು ಸಾರ್.

—ಜೆ. ಆರ್. ಕರಗುದುರಿ,




## ಆರಿಸಿದ ಎಲೆ ತೋರಿಸುವ ಕೋಳಿಮೊಟ್ಟೆ

ಇಸ್ಪೀಟು ಪ್ಯಾಕಿನಿಂದ ಯಾರನ್ನಾದರೂ ಒಂದು ಎಲೆ ಆರಿಸುವಂತೆ ಹೇಳು. ಆತರುವಾಯ ಚೆನ್ನಾಗಿ ಬೇಯಿಸಿದ ಒಂದು ಕೋಳಿಮೊಟ್ಟೆಯನ್ನು ನೀನು ಪ್ರೇಕ್ಷಕರಿಗೆ ಕೊಡು. ಆತನು ಅದನ್ನು ಚೆನ್ನಾಗಿ ಪರೀಕ್ಷೆ ಮಾಡಿ ಮತ್ತೆ ನಿನಗೆ ಕೊಟ್ಟು ಬಿಡುತ್ತಾನೆ. ಆಗ ನೀನು ಆ ಕೋಳಿಮೊಟ್ಟೆಯನ್ನು ಒಡೆದರೆ, ಪ್ರೇಕ್ಷಕನು ಆರಿಸಿದ್ದ ಇಸ್ಪೀಟು ಎಲೆ ಮೊಟ್ಟೆಯ ಒಳಭಾಗದಲ್ಲಿ ಕಾಣುತ್ತದೆ. ಈ ಟ್ರಿಕ್ಕು ಮಾಡುವುದು ಹೇಗೆಂಬುದನ್ನು ಈಗ ಹೇಳುವೆನು ಕೇಳು. ಸಭೆಗೆ ಬರುವಮುನ್ನ ನೀನು ಮನೆಯಲ್ಲಿ ಒಂದು ಕೋಳಿಮೊಟ್ಟೆಯನ್ನು ಈ ಕೆಳಗೆಹೇಳಿದ ಪ್ರಕಾರ ಸಿದ್ಧಮಾಡಿಟ್ಟುಕೊಂಡು ಬರಬೇಕು.





ಮೂರು ಔನ್ಸ್ ವಿನಿಗಾರ್ (Vinegar) ನಲ್ಲಿ ಒಂದು ಔನ್ಸ್ ಪಟಿಕದ ಪುಡಿ (Alum) ಹಾಕಿ ಕಲೆಸು. ಹೀಗೆ ಮಿಶ್ರ ಮಾಡಿದ ದ್ರಾವಕವನ್ನು ಒಂದು ಬ್ರಷ್ ಸಹಾಯದಿಂದ ಪ್ರೇಕ್ಷಕರು ಆರಿಸುವ ಎಲೆಯನ್ನು ಕೋಳಿಮೊಟ್ಟೆಯ ಮೇಲೆ ಬರೆ. ಹಾಗೆ ಬರೆದು, ಬರೆದ ಗುರುತು ಕಣ್ಣಿಗೆ ಕಾಣಿಸದಿರುವ ವರೆವಿಗೂ ಆ ಮೊಟ್ಟೆಯನ್ನು ಒಣಗಿಸು. ಆ ತರುವಾಯ ಮೊಟ್ಟೆಯನ್ನು 10, 15 ನಿಮಿಷ ಬೇಯಿಸು. ಈ ವಿಧವಾಗಿ ಮೊಟ್ಟೆ ಸಿದ್ಧಪಡಿಸಿಕೊಳ್ಳಬೇಕು.

ಮತ್ತೊಂದು ವಿಷಯ. ಪ್ರೇಕ್ಷಕನು ಆರಿಸುವ ಎಲೆಯೇ ಒಂದು, ನೀನು ಬರೆದ ಎಲೆಯೇ ಬೇರೊಂದು ಆಗಿ ಬಿಟ್ಟರೆ ನೀನು ಸಿಕ್ಕಿ ಬೀಳುವೆ. ಆದ್ದರಿಂದ ಎಲ್ಲ ಎಲೆಗಳು ಒಂದೇ ರೀತಿಯಿರುವಂತೆ ಒಂದು ವಿಶೇಷವಾದ ಪ್ಯಾಕನ್ನು ಸಂಪಾದಿಸಿಟ್ಟುಕೊಳ್ಳಬೇಕು. ಆ ಪ್ಯಾಕಿನಲ್ಲಿರುವ ಎಲೆ

ಗಳೆಲ್ಲಾ ಒಂದೇ ರೀತಿಯದಾದ್ದರಿಂದ ಪ್ರೇಕ್ಷಕನು ಯಾವ ಎಲೆ ತೆಗೆದರೂ ಬಾಧಕವಿಲ್ಲ. ತರುವಾಯ ಮೊಟ್ಟೆ ಒಡೆದರೆ ಅವರು ಆರಿಸಿದ ಎಲೆ ಮೊಟ್ಟೆಯ ಮೇಲೆ ಸ್ಪಷ್ಟವಾಗಿ ಬರೆದಿರುವುದನ್ನು ನೋಡಿ ವಿಸ್ಮಯ ಪಡುವರು.

[ಈ ಟ್ರಿಕ್ ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ 'ಚಂದಮಾಮ' ನ ಹೆಸರು ಸೂಚಿಸಿ ಪ್ರೊಫೆಸರರಿಗೆ ಇಂಗ್ಲಿಷಿನಲ್ಲಿ ಬರೆಯಬಹುದು. ಆದರೆ ಅವರ ಹಳೆಯ ವಿಳಾಸಕ್ಕೆ ಬರೆಯಬೇಡಿ. ಒಂದು ವಿಶೇಷ ಕಾರಣದಿಂದ ಅವರು ತಮ್ಮ ವಿಳಾಸ ಬದಲಾಯಿಸಬೇಕಾಗಿ ಬಂತು. ಕಾರಣ ಹೀಗಿದೆ:—]

ಈ ನಡುವೆ ಪ್ರೊಫೆಸರರು ತಮ್ಮ ಮೋಡಿ ವಿದ್ಯೆಯನ್ನು ಪ್ರದರ್ಶಿಸಲು ಬೊಂಬಾಯಿಗೆ ಹೋಗಿದ್ದಾಗ ಒಂದು ವಿಚಿತ್ರ ನಡೆಯಿತು. ಯಾರೋ ತುಂಟರು ಪ್ರೊಫೆಸರರ ಟಪಾಲುಪೆಟ್ಟಿಗೆಯನ್ನು ಒಡೆದು ಅದರಲ್ಲಿದ್ದ ಕಾಗದಗಳೆಲ್ಲವನ್ನೂ ಕದ್ದುಕೊಂಡುಬಿಟ್ಟರು. ಆ ರೀತಿ ಕಳೆದು ಹೋದ ಕಾಗದಗಳಲ್ಲಿ ನೀವು ಬರೆದ ಕಾಗದವೂ ಇದ್ದಿರಬಹುದು. ನೀವು ಪ್ರೊಫೆಸರಿಗೆ ಬರೆದ ಕಾಗದಗಳಿಗೆ ಜವಾಬು ಬರದಿದ್ದರೆ ಅದರ ಕಾರಣ ಇದೇ ಎಂದು ಭಾವಿಸಿ. ಇನ್ನು ಮುಂದೆ ನೀವು ಅವರಿಗೆ ಬರೆಯುವ ಕಾಗದಗಳನ್ನು ಪೋಸ್ಟ್ ಬಾಕ್ಸ್ ವಿಳಾಸಕ್ಕೆ ಹಾಕದೆ ಈ ಹೊಸ ಪತ್ತೆಗೆ ಬರೆಯಿರಿ.

ಪ್ರೊಫೆಸರ್ ಪಿ. ಸಿ. ಸರ್ಕಾರ್,
ಮೆಜಿಷಿಯನ್
12/3/A, ಜಮೀರ್ ಲೇನ್, ಬಾಲೀಗಂಜ್.
ಕಲಕತ್ತಾ-19



ಕೆ. ಭಾಗ್ಯಲಕ್ಷ್ಮಿ, ಬೆಂಗಳೂರು



ಟಿ. ಸೌಭಾಗ್ಯ, ಮೈಸೂರು




ಈ ಚಿತ್ರದಲ್ಲಿ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI
Printed and Published by B. NAGI REDDI at the B. N. K. Press, Madras.



Chandamama, May '51 Photo by T. Suryanarayan

ಹಾಂ.... ಹೀಗೆ !!

